# ಸುಧಾಮಣಿ

ಮಲ್ಲಿಕಾ

# ಸುಧಾಮಣಿ

## ಮಲ್ಲಿಕಾ

ಜಗದಂಬ ವಿಚಿತ್ರಮತ್ರ ಕಿಂ
ಪರಿಪೂರ್ಣಾ ಕರುಣಾಸ್ತಿ ಚೇನ್ಮಯಿ।
ಅಪರಾಧಪರಂ ಪರಾವೃತಂ
ನಹಿಮಾತಾ ಸಮುಪೇಕ್ಷತೇ ಸುತಮ್॥

Sudhamani in Kannada by 'Mallika'
Published by Lakshmi Prakashana,
7, Langford Road, Bangalore-560 025.

ಪ್ರಥಮ ಮುದ್ರಣ : ೧೯೮೭



ಬೆಲೆ: ಇಪ್ಪತ್ನಾಲ್ಕು ರೂಪಾಯಿಗಳು

ಮುದ್ರಕರು :

ನ್ಯೂ ಐಡಿಯಾಸ್
30, 15ನೇ ಅಡ್ಡರಸ್ತೆ,
ಮೂರನೆಯ ವಿಭಾಗ ಜಯನಗರ
ಬೆಂಗಳೂರು-560 011

"ಶ್ರೀ ಲಕ್ಷ್ಮೀಪಾದಾರ್ಪಣಮಸ್ತು"

# ಸುಧಾಮಣಿ

ಮಲ್ಲಿಕಾ

ಲಕ್ಷ್ಮೀ ಪ್ರಕಾಶನ
7, ಲ್ಯಾಂಗ್ ಫೋರ್ಡ್ ರೋಡ್
ಬೆಂಗಳೂರು—560 025

# ಪರಿವಿಡಿ

# ನಿವೇದನೆ

ಲಕ್ಷ್ಮೀ ಪ್ರಕಾಶನ ಮಾಲಿಕೆಯಲ್ಲಿ ಸುಧಾಮಣಿ ನಲವತ್ತ ಮೂರನೆಯ ಕುಸುಮವಾಗಿ ಅರಳಿ ಇಂದು ಜಗದ್ಬೆಳಕಿಗೆ ಬರುತ್ತಿದೆ. ಜೀವನದ ನಾನಾ ಮುಖಗಳಿಗೆ ದರ್ಪಣವಿಡಿದ ಇದು ಸಣ್ಣ ಕಥೆಗಳ ಸಂಕಲನ.

ಈ ಗ್ರಂಥಾವಲೋಕನದಿಂದ ಓದುಗರಿಗೆ ಕಿಂಚಿತ್ ಸಮಾಧಾನ ಅಥವಾ ಮನರಂಜನೆ ಮೂಡುವುದಾದರೆ ಲೇಖನಿಯ ಶ್ರಮ ಪರಿಹಾರವಾಗುವುದು ಎಂದೇ ಭಾವಿಸುವೆ. ಆಗಾಗ ಎಂದೋ ಮನದಲ್ಲಿ ಮೂಡಿ ಕೃತಿಗಿಳಿದರೂ ಪ್ರಕಟವಾಗದೆ ಉಳಿದ ಕೃತಿಗಳನ್ನು ಈಗ ಸಂಕಲಿಸಿ ಹೊರ ತರುವ ಸಾಹಸ ಮಾಡಿರುವೆ.

ಮುಂದಿನ ಕೃತಿಗಳನ್ನು ಹೊರತರಲು ಭಗವಂತನ ಕೃಪೆ ಇರಬೇಕು.

ಪ್ರಭವನಾಮ ಸಂವತ್ಸರ — ಮಲ್ಲಿಕಾ

ಕಾರ್ತೀಕ ಸಪ್ತಮಿ ಗುರುವಾರ — ೨೯-೧೦-೧೯೮೭

# ಹರಕೆ

What will be, will be....

ಡಾ|| ಹೆನ್ರಿ ಥಾಮಸ್ ಕ್ಲಿನಿಕ್.

ಸಣ್ಣ ಆಸ್ಪತ್ರೆ. ಸಣ್ಣ ಹೊರಾವರಣ.

ಅದರಲ್ಲಿ ನಿಜವಾಗಿಯೂ ಸುಂದರ ಉದ್ಯಾನವನ. ಆಧುನಿಕ ಕಟ್ಟಡವಾದುದರಿಂದ ಸೌಕರ್ಯಗಳಿಗೆ ಕೊರತೆಯಿಲ್ಲ. ಒಂಭತ್ತನೆಯ ನಂಬರಿನ ಕೊಠಡಿಯಲ್ಲಿ ಎರಡು ಸಾಲುಗಳಲ್ಲಿ ಹೊಂದಿಸಿದ್ದ ಹತ್ತು ಮಂಚಗಳೂ ರೋಗಿಗಳಿಂದ ಭರ್ತಿ. ಕೊನೆಯ ಮಂಚದಲ್ಲಿ ಅಂತೋಣಿ ಮಲಗಿದ್ದ. ಜೀವಶ್ಯವವಾದ ಮುಖದಲ್ಲಿ ಖಳೆಯೇ ಇರಲಿಲ್ಲ. ಮೂವತ್ತಾರು ದಿನಗಳ ಚಿಕಿತ್ಸೆ ಅಂತಹ ಪ್ರತಿಫಲವನ್ನೇನೂ ಕೊಟ್ಟಿರದೆ ಕಂಗಾಲಾಗಿದ್ದ. ಬದುಕುಳಿವ ಆಸೆಯಿಂದ ಡಾಕ್ಟರನ್ನು ದಿನವೂ ಕೈಮುಗಿದು ಬೇಡಿಕೊಳ್ಳುತಿದ್ದ. ಆದರೂ ಸ್ಥಿತಿಗತಿ ಬದಲಾಗಲಿಲ್ಲ. ಅವನುಕೆಲಸ ಮಾಡುತಿದ್ದ ಮಿಥಿಲೇಶ್ವರ್ ವೀವಿಂಗ್ ಫ್ಯಾಕ್ಟರಿ ಅವನನ್ನು ಆಸ್ಪತ್ರೆಗೆ ಸೇರಿಸಿತ್ತು. ಒಂದೆರಡು ಬಾರಿ ಯಜಮಾನ ಬಂದು ಹೋಗಿದ್ದ ಕೂಡ.

ಆದರೇನು ? ಆರೋಗ್ಯ ಸುಧಾರಿಸುವ ಭರವಸೆಯೂ ಕೂಡ ಈಗೀಗ ಅಳಿಯುತ್ತಿದೆ. ಯಾವ ಗಳಿಗೆಯಲ್ಲಿ ಬಾಳಿನ ಹೆಬ್ಬಾಗಿಲು ತೆರೆಯಿತೋ ಅಂದಿನಿಂದ ಒಂದಲ್ಲ, ಒಂದು ಸಂಕಟ–ಸಂಕಷ್ಟಗಳು ಒದಗುತ್ತಲೇ ಇವೆ. ಅದಕ್ಕೆ ಕೊನೆಮೊದಲೇ ಇಲ್ಲ. ಏಸು ಸ್ವಾಮಿಯ ಲಾಕೆಟ್ ಕೊರಳಲ್ಲಿ. ಏಸು ಸ್ವಾಮಿಯ ಚಿತ್ರ ಕಬೋರ್ಡಿನ ಮೇಲೆ. ಗೂಡಿನಲ್ಲೊಂದು ತಾಯಿ

ಮೇರಿಯು ಕಂದ ಏಸುವನ್ನು ಎತ್ತಿಕೊಂಡಿರುವ ಸುಂದರ ಮೂರ್ತಿ. ಆ ದಯಾಪೂರ್ಣ ದೇವತೆಗಳನ್ನು ಎಷ್ಟೆಷ್ಟು ಬೇಡಿಕೊಂಡರೂ ತನ್ನ ಮೊರೆ ಮುಟ್ಟುತ್ತಿಲ್ಲವೇಕೋ. ಗೆಳೆಯರನೇಕರಿಗೆ ಏಸು ಸ್ವಾಮಿ ಅನುಗ್ರಹಿಸಿದ್ದು ಗೊತ್ತು. ಆ ಬಗ್ಗೆ ಅನೇಕ ಕತೆಗಳನ್ನು ಕೇಳಿ ಹಿಗ್ಗಿದ್ದಾನೆ. ಆದರೆ.....?

ಎದೆಯಾಳದಲ್ಲಿ ಬಿಸಿಯುಸಿರು ಸಿಕ್ಕಿಕೊಂಡಂತೆ ತಡೆತಡೆದು ಹರಿದಾಡಿತು.

ರೋಗದ ಪಿಶಾಚ ಹಸ್ತದ ಹಿಡಿತ ಹಿಂಸ್ರಕ. ದೈಹಿಕ ಹಿಂಸೆ ಮಾತ್ರವಲ್ಲ ; ಆತ್ಮದ ಹಿಂಸೆಯೂ ಕೂಡ. ನೋಟ ಮಾಡಿನ ಮೇಲೆ ಹರಿದಿತ್ತು. ಅಲ್ಲಿ ದೃಷ್ಟಿಗೆ ಬಿದ್ದುದು ಹಲ್ಲಿ ಮಾತ್ರ. ಗೋಡೆಯ ಮೇಲಿನ ಇರುವೆಗಳಿಗೆ ಕಾದು ಕುಳಿತಿತ್ತು ಅದು.

ಕಿಟಕಿಯ ಕಂಬಿಗಳನ್ನು ಎರಡೂ ಕೈಗಳಿಂದ ಹಿಡಿದುಕೊಂಡು ದೂರದಲ್ಲಿ ಕಂಡು ಬರುವ ರಾಜಾಭಾಯಿ ಕ್ಲಾಕ್ ಟವರ್ ಮೇಲೆ ದೃಷ್ಟಿ ಇಟ್ಟಿದ್ದಳು ಮಾರಿಯಾ. ಅಲ್ಲಿನ ಕಛೇರಿಗಳ ಸುಂದರ ದೃಶ್ಯ ಮತ್ತು ಪುಷ್ಪಭರಿತ ಉದ್ಯಾನವನ ಕಣ್ಸೆಳೆಯುವ ಮೋಹಕ ದೃಶ್ಯವಾಗಿದ್ದರೂ ಮಾನಸಿಕ ಅಸ್ವಾಸ್ಥ್ಯದಿಂದ ನರನರಗಳೂ ನರಳುತ್ತವೆ. ಪತಿಯ ಸಾವು-ಬದುಕಿನ ಹೋರಾಟ ಹೃದಯವನ್ನು ಕಾಣದ ಕೈಗಳಿಂದ ಹಿಂಡುತ್ತದೆ. ಕಣ್ಣುಗಳು ಮತ್ತೆ ಮತ್ತೆ ಹನಿಯುತ್ತವೆ.

ಒಮ್ಮೆ ನೀಳವಾದ ಉಸಿರನ್ನು ಹೊರಹಾಕಿ ದೃಷ್ಟಿಯನ್ನು ಮತ್ತೆ ರಾಜಾಭಾಯಿ ಕ್ಲಾಕ್ ಟವರ್ ಕಡೆ ನಿಟ್ಟಿಸಿದಳು. ಆ ಮನೋಹರ ದೃಶ್ಯ ಕಣ್ಮನಗಳನ್ನು ಬೇಡವೆಂದರೂ ಸೂಜಿಗಲ್ಲಿನಂತೆ ಆಕರ್ಷಿಸುತ್ತದೆ. ಸ್ವರ್ಗ ಸದೃಶವಾದ ಭವನ ಮಂಡಲ ಆಸ್ಪತ್ರೆಗೆ ಹತ್ತಿರ. ತನ್ನಂತಹ ದೀನಾತಿ ದೀನರಿಗೆ ದೂರದೂರವೇ. ತನ್ನ ಜೀವನದಲ್ಲಿ ಒಂದೇ ಒಂದು ಗಳಿಗೆಯನ್ನೂ ಅಂತಹ ಸುಂದರ ಸ್ಥಳದಲ್ಲಿ ಕಳೆಯಲಿಲ್ಲ. ನರಕ ಕೂಪದಂತಹ ಕೊಳೆಗೇರಿಯಲ್ಲಿ ವಾಸ. ಅಲ್ಲೇ ತನ್ನ ಬಾಳಿಗೆ ಮುಕ್ತಾಯ ಕೂಡ. ಈ ದೌರ್ಭಾಗ್ಯ ಎಂದೆಂದಿಗೂ ಹರಿಯುವಂತಾದ್ದಲ್ಲ.........

ಯೋಚನೆಯು ಅಲ್ಲಿಗೆ ತಟ್ಟನೆ ನಿಂತಿತು.

ನೋಟ ಪತಿಯಕಡೆ ನೋಡಲಾರದೆ ನೋಡಿದಾಗ ಅವನು ನಿದ್ದೆಯಲ್ಲಿದ್ದ. ಹೊದ್ದ ಹೊದಿಕೆಯ ಮೇಲೆ ಉಸಿರಾಟದ ಏರಿಳಿತ ಕಾಣಿಸುತ್ತಿತ್ತು.

ಮುಂಬೈ ನಗರಿಯ ಜನ ಸಂಕೀರ್ಣತೆ ಕಿಷ್ಕಿಂಧತೆ ಮನಸ್ಸಿಗೆ ಬೇಸರ ಹಿಡಿಸುವಷ್ಟು ಮೀರಿದ ವಿಷಯ. ತಮ್ಮ ಬೀಡಿಗೂ ರಾಜಾಭಾಯಿ ಕ್ಲಾಕ್ ಟವರ್ ಭವನ ಮಂಡಲಿಗೂ ಹೋಲಿಸಿದರೆ ನಾಕ–ನರಕಗಳಿಗಿರುವಷ್ಟು ಅಂತರ. ಹೋಗಲಿ, ಸುಖಿಗಳು ಎಂದೆಂದಿಗೂ ಪರಮ ಸುಖಿಗಳೇ. ದೇವರು ನಮ್ಮ ಜೀವನದಲ್ಲಿ ಒಂದೇ ಒಂದು ಅಂತಹ ಸುದಿನವನ್ನು ಕರುಣಿಸಿದ್ದರೆ ಏನು ನಷ್ಟವಾಗುತಿತ್ತೋ....

ಮಾರಿಯಾ ನಿಟ್ಟುಸಿರು ಬಿಟ್ಟಳು. ಮನೋಭೂಮಿಕೆಯಲ್ಲಿ ಏನೋ ಒಂದು ಬಗೆಯ ಮುಜುಗರ–ಸಂಕಟ. ಮಂಚದ ಮೇಲೆ ಕಾಲದೆಶೆಯಲ್ಲಿ ಮೈಮುದುಡಿ ಕುಳಿತುಕೊಂಡಳು.

* * * *

ರೋಸಲಿನ್ ಶಾಲೆಯ ಉಡುಪಿನಲ್ಲೇ ಆಸ್ಪತ್ರೆಯ ಮೆಟ್ಟಲು ಹತ್ತಿದಳು.

ವರಾಂಡದಲ್ಲೇ ಎದುರಾದ ತಾಯಿಯ ಮುಖದಲ್ಲಿ ಕಳೆಯೇ ಇಲ್ಲ.

“ಮನೆಗೆ ಹೋಗಿ ಬಂದೆಯಾ ರೋಸೀ ?” ಕೇಳಲಾರದೇ ಕೇಳಿದಳು ತಾಯಿ.

“ಇಲ್ಲಮ್ಮಾ. ಹೀಗೆಯೇ ಬಂದೆ.”

“ಹೊಟ್ಟೆಗೇನು ಮಾಡುತ್ತಿ ?”

“ಏನೂ ಬೇಡ ; ರಾತ್ರಿ ಊಟ ಮಾಡುವೆ, ಸಾಕು.”

ಅವಳು ಹಾಗೆಂದರೂ ಹೊಟ್ಟೆಯ ಹಸಿವೆಯಿಂದ ಮುಖ ಬಾಡಿತ್ತು. ನೇರವಾಗಿ ಮಂಚದ ಬಳಿಗೆ ಹೋದಳು. ತಂದೆಯ ನೆಟ್ಟ ಕಂಗಳು ಇತ್ತಲೇ ನಿಟ್ಟಿಸುತಿದ್ದುವು. ಅದರಲ್ಲಿ ಆಸೆಯ ಝುಳಕ್ಕಿಂತಲೂ ವ್ಯಸನದ ದಳ್ಳುರಿಯೇ ಹೆಚ್ಚು.

“ಹೇಗಿದ್ದಿ ಅಪ್ಪಾ ?”

“ಬಿಡು, ಇದು ಹರಿಯುವ ರೋಗವಲ್ಲ.”

“ಅಂದರೆ.....?”

“ಇದು ನನ್ನ ಉಳಿಸಲು ಬರಲಿಲ್ಲ ಮಗಳೇ !”

ಆ ಮಾತಿಗೆ ತಾಯಿ ಮಗಳ ಕಣ್ಣುಗಳಲ್ಲಿ ಸಣ್ಣಗೆ ನೀರಾಡಿತು. ಮಾರಿಯಾಳ ಮನಸ್ಸು ಅಳಿದ ಮೂವರು ಗಂಡುಮಕ್ಕಳ ಸುತ್ತಮುತ್ತ ಹರಿದಾಡಿತು. ಮೊದಲ ಮಗ ಸ್ಟೀವನ್‌ಸನ್ ಆರುವರ್ಷದವನಿದ್ದಾಗ ವಿಷಮ ಶೀತ ಜ್ವರಕ್ಕೆ ಬಲಿಯಾದ. ಬಡತನದ ಕಾರಣ ಉತ್ತಮ ಚಿಕಿತ್ಸೆ ನೀಡಲಾಗಲಿಲ್ಲ. ದುರ್ವಿಧಿ ಅಷ್ಟಕ್ಕೆ ಸುಮ್ಮನಾಯಿತೇ ? ಅನಂತರ..... ಅನಂತರ ಹೂಡಿದ ಸಂಚು ಸಾಮಾನ್ಯವಲ್ಲ. ಇದೇ ಎರಡು ವರ್ಷಗಳ ಕೆಳಗೆ ಸೈಕಲ್ಲಿನಲ್ಲಿ ಡಬ್ಬಲ್ ರೈಡ್ ಮಾಡುತ್ತ ಬಸ್ಸಿಗೆ ಸಿಕ್ಕಿ ಒಂದೇ ಬಾರಿಗೆ ಮೃತ್ಯುವಶರಾದ ಹತ್ತು-ಹನ್ನೆರಡರ ಪಾಲ್ ಮತ್ತು ಜಾರ್ಜ್ ! ಎಂತಹ ಹೃದಯ ವಿದ್ರಾವಕ ಚಿತ್ರ ? ಹಾ ! ದುರ್ವಿಧಿ ದುಃಖದ ಕೋಟೆಯನ್ನೇ ಕಟ್ಟಿತು ! ಈಗ ಪತಿಯ ಪ್ರಾಣಕ್ಕೂ ಕುತ್ತು.....ಮುಂದೇನು ?

ಆ ಕೂಡಲೇ ದೇಹದಾದ್ಯಂತ ಕಂಪನದ ಅಲೆ ಹರಿದಾಡತೊಡಗಿತು. ಕಣ್ಣ ಮುಂದಿನ ವಸ್ತುಗಳೆಲ್ಲಾ ಗಿರಗಿರನೆ ಸುತ್ತ ತೊಡಗಿದುವು. ಮಾರಿಯಾ ಅಲ್ಲೇ ಕುಸಿದು ಕುಳಿತಳು. ಆ ಕ್ಷಣವೇ ಮುಖದಮೇಲೆ ಸ್ವೇದ ಬಿಂದುಗಳು ತುಂತುರು ತುಂತುರಾಗಿ ಕಾಣಿಸಿಕೊಂಡುವು. ಅವಳ ಮುಖಸ್ಥಿತಿಯನ್ನು ನೋಡಿ ಅಂತೋಣಿ ನಿಟ್ಟುಸಿರು ಬಿಟ್ಟ. ಕಣ್ಣುಗಳಂಚಿನಲ್ಲಿ ಕಂಬನಿಗಳುಕ್ಕಿದುವು. ರೋಸಲಿನ್ ನೋಡಲಾರದೆ ನೋಡಿ “ದೇವರಿದ್ದಾನೆ !” ಎಂದಷ್ಟು ನುಡಿದು ಕಿಟಕಿಯ ಬಳಿಗೆ ಹೋದಳು. ದೂರದಲ್ಲಿ ಅದೇ ರಾಜಾಭಾಯಿ ಟವರ್ ! ಆ ಸುರಸುಂದರ ಲೋಕ ಕಣ್ಣಿಗೆ ಆಹ್ಲಾದಕರ. ದುಃಖದ ನೆಲೆಯಲ್ಲಿ ಅದೊಂದು ಭ್ರಾಮಕಲೋಕ ! ಮುಂಬೈಯಂತಹ ಕಿಷ್ಕಿಂಧಾನಗರಿಯಲ್ಲಿ ಅದೊಂದು ದಿವ್ಯ ದೇಗುಲ ಎಂದರೆ ತಪ್ಪಾಗಲಾರದೇನೋ.....ರೋಸಲಿನ್ನಳಿಗೆ ಅಲ್ಲಿಂದ ನೋಟವನ್ನು ಚಲಿಸಲಾಗಲಿಲ್ಲ. ಆ ಅಪೂರ್ವ ಸೌಂದರ್ಯವನ್ನು ಮನದಲ್ಲೇ ಮೆಲುಕು ಹಾಕಿದಳು. ಚಿಂತೆಯ ಕೀಟಕ್ಕೆ ಅದೊಂದು ಲಗಾಮು. ಹೊಟ್ಟೆಯಲ್ಲಿ ಹಸಿವು, ಸಂಕಟ, ದುಃಖ.

“ರೋಸೀ.....” ಅಂತೋಣಿಯ ಕ್ಷೀಣಿತ ಕರೆ.

“..........”

“ರೋಸೀ.....!”

ನಿದ್ರಾಲೋಕದಿಂದ ಎಚ್ಚೆತ್ತವಳಂತೆ ತಟ್ಟನೆ ಹಾಸಿಗೆಯ ಬಳಿಗೆ ಬಂದು "ಏನಪ್ಪಾ ?" ಎಂದಳು ರೋಸಲಿನ್.

"ನೀನು ಮನೆಗೆ ಹೋಗು. ನಾಳೆಯಿಂದ ಪರೀಕ್ಷೆ ಇದೆ....ಅಲ್ಲವೇ?"

"ಹೌದು.....ಅಪ್ಪಾ !"

"ಓದಿಕೊ ಮಗಳೇ !"

"ಆಗಲಿ. ಅಪ್ಪಾ !"

ರೋಸಲಿನಳ ಗಮನ ಮನೆಯ ಕಡೆ ಹರಿಯಿತು. ಆ ಮನೆಯೆಂಬುವ ಗೂಡನ್ನು ನೆನೆಸಿಕೊಂಡರೆ ಒಡಲೆಲ್ಲಾ ಸಂಕಟ. ಕೊಳಚೆ ಪ್ರದೇಶ. ಗುಂಯ್ ಎಂದು ನುಗ್ಗುವ ಸೊಳ್ಳೆ–ನೊಣಗಳು. ನೆರೆ ಹೊರೆಯುವರ ಗಲಾಟೆ–ಗದ್ದಲ. ದುರ್ವಾಸನೆಯ ನರಕರೂಪ. ಮುಂಬೈನಲ್ಲಿ ವಸತಿ ಸೌಕರ್ಯ ಕಷ್ಟ. ಎಲ್ಲಾ ಕೂಲಿಕಾರರಿಗೂ ಒಡೆಯರಾಗಲೀ ಸರಕಾರವಾಗಲೀ ವಸತಿ ಒದಗಿಸುವಷ್ಟು ದಯೆ ತೋರುವುದಿಲ್ಲ. ದೀನರು ಎಂದೆಂದೂ ದೀನರೇ. ದಾರಿದ್ರ್ಯದೇವತೆಯ ತಾಂಡವ ನೃತ್ಯ ಈ ಜನ್ಮಕ್ಕಂತೂ ಕಳೆಯುವ ಪ್ರಶ್ನೆಯೇ ಇಲ್ಲ. ಅಂತಹ ಕಡೆ ವಿದ್ಯೆ ಹತ್ತುವುದಾದರೂ ಹೇಗೆ ? ಈ ಸಮಾಜ ಉದ್ಧಾರ ಆಗುವ ಬಗೆ ? ಅದೇ ಅರ್ಥವಾಗದ ವಿಷಯ. ಆಲೋಚನಾತೀತ ಎಂದರೂ ತಪ್ಪಲ್ಲ.

*   *   *   *

ಡಾಕ್ಟರುಗಳ ತಂಡ ಹಾಸಿಗೆಯಿಂದ ಹಾಸಿಗೆಗೆ ಚಲಿಸಿ ಚಾರ್ಟುಗಳನ್ನು ನೋಡಿ ರೋಗಿಗಳ ಸ್ಥಿತಿಗತಿಗಳಿಗನುಗುಣವಾಗಿ ಔಷಧಿಯನ್ನು ಬರೆದು ಸಿಸ್ಟರಿಗೆ ಹೇಳಬೇಕಾದುದನ್ನು ಹೇಳಿ ಮುಂದುವರಿಯುತ್ತ ಅಂತೋಣಿಯ ಹಾಸಿಗೆಗೆ ಬಂದರು. ಅದೇ ಸ್ವರೂಪ ; ಅದೇ ರೋಗ ; ಅದೇ ಜೀವಶ್ಶವ.

ಅಂತೋಣಿ ಆಗಾಗ ಖಾಹಿಲೆ ಬೀಳುತ್ತಾನೆಂದು ಕಾರ್ಖಾನೆಯ ಒಡೆಯರಿಗೂ ಈಗೀಗ ಅಸಡ್ಡೆ. ಅವನ ಸ್ಥಿತಿಗತಿ ಸುಧಾರಿಸುತ್ತಿಲ್ಲವೆಂದು ಡಾಕ್ಟರಿಗೂ ನಿರ್ಲಕ್ಷ್ಯ.

ರೋಗಿಗೆ ಮರಣ ಸಂಕಟ. ಅನುಭವಿಸಲಾಗದ ಸಂಕಟ. ಬಸಬಸನೆ ಅತ್ತು ಹೇಳಿದ,

"ಸ್ವಾಮಿ ! ಈ ಜೀವ ಅಳಿದರೆ ಮಡದಿ-ಮಗಳು ಅನಾಥರಾಗುತ್ತಾರೆ. ಹೇಗಾದರೂ ದಯವಿಟ್ಟು ಕಾಪಾಡಿ.....!"

ಅವನ ಅಳು-ಗೋಳು ದಿನವೂ ಇದ್ದದ್ದೇ. ಇದಕ್ಕಿಂತ ಇನ್ನೇನೂ ಸಾಧ್ಯವಾಗದು ಎಂಬ ಮನೋಭಾವ ಅಥವಾ ತಾತ್ಸಾರ ಡಾಕ್ಟರಿಗೆ.

"ಕೆಲವು ದಿನಗಳಲ್ಲಿ ಸರಿಹೋಗುತ್ತಿ ! ದೇವರಿದ್ದಾನೆ, ವ್ಯಥೆ ಪಟ್ಟುಕೊಳ್ಳಬೇಡ. ನಿನಗೆ ವ್ಯಥೆಯಿಂದಲೇ ಖಾಹಿಲೆ....." ಎಂದಷ್ಟು ನುಡಿದು ಚಾರ್ಟಿನ ಮೇಲೆ ಏನೋ ಗೀಚಿ ಹೊರಟು ಹೋದರು ಡಾಕ್ಟರು. ಅವರು ಕಣ್ಮರೆಯಾಗುವವರೆಗೂ ನೋಡಿದ ದೀನ ದೃಷ್ಟಿ ಹಿಮ್ಮರಳಿತು.

ಅದೇ ಕಿಟಕಿಯಲ್ಲಿ ಮೊಗವಿಟ್ಟು ಮಾರಿಯಾ ಕಂಬನಿ ಮಿಡಿದಳು. ಅದೇ ಕ್ಲಾಕ್ ಟವರ್ ಈ ಬೃಹದ್ ಮುಂಬೈ ನಗರಿಯಲ್ಲಿನ ಸುಖದುಃಖಗಳನ್ನು ಎಷ್ಟು ನೋಡಿದೆಯೋ ಎಷ್ಟೆಷ್ಟು ತಿರಸ್ಕಾರವೋ.....ಯೋಚಿಸಿಸುತಿದ್ದಂತೆಯೇ ಎದೆಯಾಳದಿಂದ ನಿಟ್ಟುಸಿರೊಂದು ದೀರ್ಘವಾಗಿ ಹೊರಹೊಮ್ಮಿತು.

"ಮಾರಿಯಾ.....!" ಪತಿಯು ಕರೆ.

ಮಾರಿಯಾ ಹಾಸಿಗೆಯ ಬಳಿ ಮೈಬಾಗಿ ಕೇಳಿದಳು "ಏನು ?"

"ನೀನು ಏಸು ಸ್ವಾಮಿಗೆ ಏನಾದರೂ ಹರಕೆ ಇಟ್ಟುಕೊ. ಅವನು ಕರುಣೆ ತೋರಬಹುದು."

ಮಾರಿಯಾ ಸ್ವಲ್ಪ ಯೋಚನೆಗೊಳಗಾದಳು. ಏನೆಂದು ಹರಕೆ ಇಟ್ಟುಕೊಳ್ಳುವುದು ? ಅದೇ ತಿಳಿಯುತ್ತಿಲ್ಲ.....ಒಂದೆರಡು ಗಳಿಗೆ ಯೋಚಿಸಿ ಹೇಳಿದಳು "ಆಗಲಿ....ನಾಳೆ ಚರ್ಚಿಗೆ ಹೋಗಿಯೇ ಬರುವೆ. ನೀನು ಮನದಲ್ಲೇ ಧ್ಯಾನಿಸುತ್ತಿರು. ಏಸು ಸ್ವಾಮಿ ಖಂಡಿತ ಕೈಬಿಡಲಾರ."

ಗದ್ಗದ ದನಿಯಲ್ಲಿ ಬಿತ್ತರಿಸಿದಳು ಮಾರಿಯಾ.

"ಅಷ್ಟು ಮಾಡು. ಸ್ವಾಮಿ ದಯೆದೋರುತ್ತಾನೆ ಎನಿಸುತ್ತೆ ನನಗೆ."

ಮಾರಿಯಾ ಮರು ನುಡಿಯದೆ ತಲೆಯಾಡಿಸಿದಳು.

ಮರುದಿನ ಆಸ್ಪತ್ರೆಗೆ ಹೋಗುವ ಮುನ್ನ ಚರ್ಚಿಗೆ ಹೋಗಿ ಮಂಡಿಯೂರಿ ಕುಳಿತು ಪ್ರಾರ್ಥನೆ ಸಲ್ಲಿಸಿದಳು ಮಡದಿ. ಏನೆಂದು ಹರಕೆ ಹೊರುವುದು ಎಂಬುದು ತನ್ನ ಮುಂದಿರುವ ಪ್ರಶ್ನೆ. ತನ್ನಲ್ಲಿ ಹೃದಯ ಪುಷ್ಪ ಹೊರತು ಮತ್ತೊಂದಿಲ್ಲ. ಏನು ಮಾಡಲಿ ? ಕೂಡಲೇ ಮನೋಭಿತ್ತಿಯಲ್ಲಿ ಮಗಳು ರೋಸಲಿನ್ ಸುಳಿದಳು ನಿಜ. ರೋಸಲಿನ್ ನಮ್ಮದಾದ ತುಂಬಾ ಪ್ರೀತಿಯ ವಸ್ತುವೊಂದಿದೆ. ಏನೆಂದು ಹರಕೆ ಇಟ್ಟುಕೊಳ್ಳಲಿ? ಎಂಬ ಪ್ರಶ್ನೆ ಎದ್ದಾಗಲೇ ಒಂದುಕ್ಷಣ ಯೋಚಿಸಿ ಅವಳನ್ನು 'ನನ್' ಮಾಡಿ ನಿನ್ನ ಸೇವೆಗೆ ಒಪ್ಪಿಸುವೆ. ನನ್ನ ಪತಿಯನ್ನು ಕರುಣೆಯಿಂದ ರಕ್ಷಿಸು ಸ್ವಾಮಿ!" ಎಂದು ಪ್ರಾರ್ಥಿಸಿಕೊಂಡಳು. ಕೂಡಲೆ ಒಬ್ಬಳೇ ಮಗಳು. ನನ್ ಮಾಡಿದರೆ ಬಾಳಿನ ಕುಡಿ ಒಡೆಯುವಂತಿಲ್ಲ. ಮೇಲಾಗಿ, ಅವಳನ್ನು ಕೇಳಲಿಲ್ಲ ಕೂಡ ಎಂಬ ಯೋಚನೆಯೂ ಬಂತು. ಈಗ ಕೇಳುವುದೆಂದರೆ ಪರೀಕ್ಷೆ ನಡೆಯುತ್ತಿದೆ ಅವಳು ಆತಂಕಕ್ಕೆ ಒಳಗಾಗಬಾರದು. ಪರೀಕ್ಷೆ ಮುಗಿದ ನಂತರ ಹೇಳುವುದೇ ಸರಿ. ಸಧ್ಯ, ಈ ಗಂಡಾಂತರ ತಪ್ಪಿದರೆ ನಮ್ಮ ಬದುಕಿಗೆ ದಾರಿ. ಇಲ್ಲದಿದ್ದರೆ ಬದುಕೂ ಇಲ್ಲ 'ನನ್' ಸೇವೆಯೂ ಇಲ್ಲ ಎಂಬ ಸಮಾಧಾನದಿಂದಲೇ ಹೋದಳು ಆಸ್ಪತ್ರೆಗೆ.

ಅಂತೋಣಿ ಕೇಳಿದಾಗ "ಆ ಮುಹೂರ್ತದಲ್ಲಿ ಬಂದ ಯೋಚನೆ ಅದೇ. ಸರಿ, ಹಾಗೆಂದೇ ಹರಕೆ ಹೇಳಿಕೊಂಡಿರುವೆ. ಬದುಕಿಗೆ ಪರಮಾತ್ಮ ದಾರಿ ಮಾಡಿದರೆ ಸಾಕು." ಎಂದಳು ಮಾರಿಯಾ.

* * * *

ವಿಷಯ ರೋಸಲಿನ್ನಳಿಗೆ ತಿಳಿದಾಗ 'ತಂದೆಗೆ ಗುಣವಾದರೆ ಸಾಕು' ಎಂದುಕೊಂಡಳು. ಭವಿಷ್ಯದ ಬಗ್ಗೆ ಅವಳೇನೂ ಯೋಚಿಸಿರಲಿಲ್ಲವಾದುದರಿಂದ ಏನೂ ವಿಶೇಷ ತೋರದೆ ಸುಮ್ಮನಾದಳು. ಅದೃಷ್ಟವಶಾತ್ ಹರಕೆಯಿಂದಲೋ ಅಥವಾ ಚಿಕಿತ್ಸೆಯಿಂದಲೋ ಅಂತೋಣಿ ಗುಣವಾಗಿ ಮನೆಗೆ ಮರಳಿದ. ಜೀವನ ಎಂದಿನಂತೆಯೇ ಮುಂದುವರಿಯಿತು. ರೋಸಲಿನ್ನಳ ವಿದ್ಯಾಭ್ಯಾಸದ ಕೊನೆಯ ಹಂತದಲ್ಲಿ ರಾಬರ್ಟ್‌ನ ಪರಿಚಯವಾಯಿತು. ಆತ ಕಾರ್ಖಾನೆಯ ಮಾಲೀಕ, ಹಣವಂತ, ಅನುರೂಪನಾದ ವರ.

ರೋಸಲಿನ್ ಮನಸೋತುದು ಮಾತ್ರವಲ್ಲ ; ಹರಕೆಯನ್ನು ಬದಿಗೊತ್ತಿ ಆತನ ನಲ್ಮೆಯ ಮಡದಿಯಾದಳು.

ಮುಂದೆ ಎರಡು ವರ್ಷಗಳಲ್ಲೇ ಕ್ಯಾಥರೀನಳ ತಾಯಿಯಾದಳು ರೋಸಲಿನ್. ಆ ಮಗುವಿನ ಪರಿಪೋಷಣೆಯಲ್ಲಿ, ವಿದ್ಯಾಭ್ಯಾಸದಲ್ಲಿ ನಿಮಗ್ನಳಾದ ತಾಯಿ ಪರಮ ಸಂತುಷ್ಟೆ. ಪ್ರೀತಿ–ವಿಶ್ವಾಸ-ಆಸ್ಥೆ ಎಲ್ಲಾ ಅವಳ ಮೇಲೆಯೆ. ಕ್ಯಾಥರೀನ್ ಪ್ರೌಢ ವಿದ್ಯಾಭ್ಯಾಸವನ್ನು ಮುಗಿಸಿ ಅಮೆರಿಕೆಗೆ ಹೊರಟಾಗ ರೋಸಲಿನ್ನಳ ಕಣ್ಣುಗಳು ತುಂಬಿ ಬಂದುವು. ತನ್ನ ಜೀವನದ ಸರ್ವಸ್ವವೂ ಸೂರೆಯಾದಷ್ಟು ಸಂಕಟ. ಒಂದೇ ಮಗುವಿನ ಭಾಗ್ಯದಿಂದ ಜೀವನ ಸಮೃದ್ಧಿಯಾಗದು. ಇದನ್ನು ತಾನಾಗ ಯೋಚಿಸದಿದ್ದುದು ತಪ್ಪು ಎಂಬ ಆತ್ಮ ನಿರ್ಣಯಕ್ಕೆ ತಲೆಬಾಗಿದ ಅವಳು ದುಃಖತಪ್ತಳಾದಳು. ತಮ್ಮ ಮಹದೈಶ್ವರ್ಯ ಪ್ರಸ್ಥಾನಕ್ಕೆ ಎರಡು ಮೂರು ಮಕ್ಕಳಿದ್ದಿದ್ದರೂ ಚೆನ್ನಿತ್ತು. ಹೋಗಲಿ, ಇವಳಿಂದಲಾದರೂ ಈ ಜೀವನ ಸಮೃದ್ಧಿಯಾಗಲಿ ಎಂದು ಹಾರೈಸಿತು ನೊಂದ ಜೀವ.

ರಾಬರ್ಟ್ ಮಡದಿಯೊಂದಿಗೆ ಪುಣೆಗೆ ಪಯಣಿಸುತಿದ್ದಾಗ ದುರದೃಷ್ಟವಶಾತ್ ಕಾರು ಅಪಘಾತಕ್ಕೊಳಗಾಯಿತು. ದಂಪತಿಗಳು ತೀವ್ರ ಪೆಟ್ಟಿನಿಂದ ಆಸ್ಪತ್ರೆಗೆ ದಾಖಲಿಸಿದುದು ಬಹುಶಃ ಮಗಳು ಕ್ಯಾಥರೀನಳಿಗೆ ತಿಳಿಯಲೇ ಇಲ್ಲ. ತಿಳಿಸಬೇಡವೆಂದು ರಾಬರ್ಟ್ ಫ್ಯಾಕ್ಟರಿಯ ಮ್ಯಾನೇಜರಿಗೆ ತಿಳಿಸಿದ್ದ ಕೂಡ. ಇನ್ನು ಐದಾರು ತಿಂಗಳಿನಲ್ಲಿ ಮಗಳು ಹಿಂದಿರುಗಲಿದ್ದುದರಿಂದ ಈಗೊಮ್ಮೆ ಬರುವುದೇಕೆ ? ಒಮ್ಮೆಗೇ ಬಂದರೆ ಸಾಕು ಎಂದು ಆ ವಿಚಾರ ಸಂಪತ್ತಿಗೆ ಮುಕ್ತಾಯ ಹಾಡಿದ ರಾಬರ್ಟ್. ಮಡದಿಗೂ ಅದು ಸರಿಯೆನಿಸಿತು. ವಿಚಾರವಾದಿಯಾದ ಅವಳು ಸುಮ್ಮನಾದಳು. ಆದರೂ, ಹಾತೊರೆಯುತಿತ್ತು ಮನಸ್ಸು ಮಗಳಿಗಾಗಿ. ಇಬ್ಬರೂ ಒಂದೇ ಕೊಠಡಿಯಲ್ಲಿ ನೋವಿನಿಂದ ಉಸಿರಾಡುತ್ತ ಮಲಗಿದರು

ತಿಂಗಳವಾನ ಉರುಳಿ ಹೋಯಿತು.

ರಾಬರ್ಟನ ಮೂಳೆಗಳ ಮುರಿತ ಕೂಡಿದರೂ ಮಾನಸಿಕ ಆಘಾತದಿಂದ ದೈಹಿಕ–ಮಾನಸಿಕ ಸ್ವಾಸ್ಥ್ಯ ಕಳೆದುಕೊಂಡಿದ್ದ. ಫ್ಯಾಕ್ಟರಿಯ ಮೇಲ್ವಿಚಾರಣೆಗೆ ತಾನೇ ಮುಂದಾದಳು ರೋಸಲಿನ್. ಆ ಮಹತ್ತರ

ಹೊಣೆಗಾರಿಕೆಗೆ ಭುಜಕೊಟ್ಟರೂ ಕ್ಯಾಥರೀನ್ ಎಷ್ಟು ಬೇಗ ಬಂದರೆ ಅಷ್ಟು ಒಳ್ಳೆಯದು ಎಂದು ಹಾರೈಸುತಿತ್ತು ಮನಸ್ಸು. ಪತಿಯ ಸ್ವಾಸ್ಥ್ಯಕ್ಕಾಗಿ ಏಸು ಸ್ವಾಮಿಯನ್ನು ಬೇಡುತಿದ್ದಳು ರೋಸಲಿನ್. ಏಸು ಸ್ವಾಮಿಯ ಮುಂದೆ ಕ್ಯಾಂಡಲ್ ತಪ್ಪದೆ ನಂದಾದೀಪದಂತೆ ಉರಿಯುತಿತ್ತು. ಚರ್ಚಿಗೆ ಪತಿಯನ್ನು ಆಗಾಗ ಎಳೆದುಕೊಂಡು ಹೋಗುತಿದ್ದಳು. ಮಾನಸಿಕ ಮೊರೆ ತನಗರಿಯದಂತೆಯೇ ಹೊಮ್ಮುತಿತ್ತು.

ತಾನೆಷ್ಟೇ ಎಚ್ಚರವಹಿಸಿದರೂ ತಮ್ಮ ಆಸ್ಪತ್ರೆಯ ವಾಸದಲ್ಲಿ ಉತ್ಪತ್ತಿಗೆ ಕತ್ತರಿ ಪ್ರಯೋಗ ಮಾಡಿದ್ದ ಮ್ಯಾನೇಜರ್ ಪೀಟರ್. ಈ ಸಲಿಯ ನಷ್ಟ ನಷ್ಟವೇ. ಮುಂದಿನ ಸಾಲಿನಲ್ಲಿ ಸಮಗ್ರ ವ್ಯವಹಾರದಲ್ಲಿ ಕಣ್ಣಿನಮೇಲೆ ಕಣ್ಣಿಡದಿದ್ದರೆ ಮುಳುಗಿಸಿ ಬಿಟ್ಟಾರು ಈ ಜನ, ಕ್ಯಾಥರೀನ್ ಹಿಂದಿರುಗಿದರೆ ಪರಿಸ್ಥಿತಿ ಸುಧಾರಿಸುತ್ತೆ ಎಂಬ ಆಶಾಭಾವ ಮನದಲ್ಲಿ. ರೋಸಲಿನ್ ಮಗಳ ಆಗಮನವನ್ನು ಆತುರಕಾತರಗಳಿಂದ ನಿರೀಕ್ಷಿಸುತಿದ್ದಳು.

* * * *

ರಾಬರ್ಟ್ಸನ ಮಾನಸಿಕ ಅಸ್ವಾಸ್ಥ್ಯಕ್ಕೆ ಕಾರಣ ಮಾನಸಿಕ ಆಘಾತವೇ! ತಲೆಗೆ ಪೆಟ್ಟು ಬಿದ್ದಿರಲಿಲ್ಲವಾದ್ದರಿಂದ ಬುದ್ಧಿ ಶಿಥಿಲಗೊಳ್ಳದು ಎಂಬ ಧೈರ್ಯ ರೋಸಲಿನ್ನಳಿಗೆ. ಅಂತಲೇ ಚಿಕಿತ್ಸೆಯಲ್ಲಿ ತುಂಬಾ ಆಸಕ್ತಿ ವಹಿಸುತ್ತಾಳೆ. ವೈದ್ಯರ ಸೂಚನೆಯ ಮೇರೆಗೆ ಪಥ್ಯಪಾನಗಳು ನಡೆಯುತ್ತವೆ. ಆದರೂ ಸ್ಥಿತಿಗತಿ ಉತ್ತಮವಾಗಲಿಲ್ಲ. ವರ್ತಮಾನ ಪತ್ರಿಕೆ ಓದಿದರೂ ಅರ್ಥೈಸಲಾರ; ಲಾಭ-ನಷ್ಟಗಳನ್ನು ಅರಿತುಕೊಳ್ಳಲಾರ. ದೈಹಿಕ ಸ್ವಾಸ್ಥ್ಯ ಹಾಗೂ ಹೀಗೂ ಡೋಲಾಯಮಾನ.

ರೋಸಲಿನ್ ಎರಡು ದೋಣಿಗಳ ಪಯಣ ನಿರ್ವಹಿಸಿದಳು. ಮಗಳಿಂದ ಅಪರೂಪವಾಗಿ ಬರುವ ಕಾಗದಗಳಿಗೆ ಕಾದಿರುತ್ತದೆ ಮನಸ್ಸು. ಅವಳು ಬರೆದ ಕೊನೆಯ ಕಾಗದದಲ್ಲಿ ನಾನು ಬಂದಾಗ ನೀನು ನನ್ನಲ್ಲಿ ಉಂಟಾದ ಮಹತ್ತರ ಬದಲಾವಣೆಯನ್ನು ಕಂಡು ತುಂಬ ಅಚ್ಚರಿಗೊಳ್ಳಬಹುದು; ಆದೇನಿರಬಹುದೆಂದು ಊಹಿಸಬಲ್ಲೆಯಾದರೆ ಊಹಿಸಿಕೊ ಎಂದು ಕೊನೆಯ ವಾಕ್ಯದಲ್ಲಿ ಸೇರಿಸಿ ಚೀರಿಯೋ ಎಂದಿದ್ದಳು, ಕ್ಯಾಥರೀನ್.

ಆ ಕಾಗದವನ್ನು ನೋಡಿ ನಿಜವಾಗಿಯೂ ಅಚ್ಚರಿಯಾಯಿತು ರೋಸಲಿನ್ನಳಿಗೆ.

ಇದೇನು ವಿಷಯ ಅರ್ಥವಾಗದಲ್ಲ? ಬಹುಶಃ ಮದುವೆಯಾಗಿ ಪತಿಯೊಂದಿಗೆ ಬರುತ್ತಾಳೆಯೇ? ಅಥವಾ ಮಗುವಿನೊಂದಿಗೆ ಬರುವಳೇ? ಬದಲಾವಣೆ ಎಂದರೆ ಇನ್ನೇನಿರಲು ಸಾಧ್ಯ? ಎಂದೆಲ್ಲಾ ಯೋಚಿಸಿತು ಮನಸ್ಸು. ಆದರೂ, ವಿಷಯ ಅನಿರ್ಣೀತ.

ರಾಬರ್ಟ್‌ನ ಕೈಗೆ ಕಾಗದವನ್ನಿಟ್ಟು 'ಓದಿನೋಡು' ಎಂದಳು ರೋಸಲಿನ್.

ರಾಬರ್ಟ್ ಕಾಗದ ಓದಿ ನೋಡಿ ನಸುನಕ್ಕು ಸುಮ್ಮನಾದ. ಆ ಮಾರ್ಪಾಟಿನ ವಿಚಾರ ತಲೆಗೆ ಹೋಗಿರಲೇ ಇಲ್ಲ. ಆರಾಮ ಕುರ್ಚಿಯ ಮೇಲೆ ಬಿದ್ದುಕೊಂಡು ನಿರಾಳವಾಗಿ ಉಸಿರಾಡಿದ. ಮಗಳು ಹಿಂದಿರುಗುತ್ತಾಳೆ ಎಂಬ ವಿಚಾರವಾದರೂ ತಲೆಗೆ ಹೋಗಿತ್ತೋ ಇಲ್ಲವೋ ಅದನ್ನೂ ಊಹಿಸಲಾರದೇ ಹೋಗಿದ್ದಳು ರೋಸಲಿನ್.

ಕ್ಯಾಥರೀನ್ ಬರುವ ವಿಷಯವನ್ನು ತಿಳಿಸಿದ್ದರೂ ಇಂತಹ ದಿವಸ ಬರುವೆ ಎಂಬುದನ್ನು ಕರಾರುವಾಕ್ಕಾಗಿ ತಿಳಿಸಿರಲಿಲ್ಲ. ದಿನವೂ ಅವಳ ನಿರೀಕ್ಷಣೆಯಲ್ಲಿಯೇ ಕಳೆಯುತಿತ್ತು ಕಾಲಮಾನ. ಕಣ್ಣುಗಳು ಪದೇ ಪದೇ ಹಾದಿಯ ಕಡೆ ಹರಿಯುತಿದ್ದುವು.

ದಿನವೂ ಸಂಜೆ ಫ್ಯಾಕ್ಟರಿಯನ್ನು ಮುಚ್ಚಿದ ನಂತರ ಪತಿಯನ್ನು ಮೆಥಡಿಸ್ಟ್ ಚರ್ಚಿನ ಕಡೆಗೋ ರಾಜಾಭಾಯಿ ಟವರಿನ ಕಡೆಗೋ ಅಥವಾ ಬೀಚಿನ ಕಡೆಗೋ ಗಾಳಿಸವಾರಿಗಾಗಿ ಎಳೆದೊಯ್ಯುತ್ತಾಳೆ ರೋಸಲಿನ್. ಅವನು ಕೆಲವೊಮ್ಮೆ ಸಂಬದ್ಧವಾಗಿ ಮಾತಾಡಿದರೂ ಕೆಲವೊಮ್ಮೆ ಅಸಂಬದ್ಧ ಇನ್ನೂ ಕೆಲವೊಮ್ಮೆ ಮೂಕಮೌನಿ. ಅವನ ಮನಃಸ್ಥಿತಿಯನ್ನು ನೋಡಿದರೆ ರೋಸಲಿನ್ನಳಿಗೆ ಎಲ್ಲಿಲ್ಲದ ಚಿಂತೆ-ದುಃಖ. ಅವಳಿಗೀಗ ಒಂದೇ ಒಂದು ಆಶಾಬೆಳಕು.ಅದೇ ಕ್ಯಾಥರೀನಳ ಆಗಮನ ವಾರ್ತೆ.

* * * *

ಕಾರ್ಖಾನೆಯಿಂದ ಆಗತಾನೇ ಬಂದಿದ್ದಾಳೆ ರೋಸಲಿನ್.

ಮಧ್ಯಾಹ್ನದ ಚಹ ಮುಗಿದಿತ್ತು. ರಾಬರ್ಟ್ ಚಹದ ಬಸಿಯನ್ನು ಅಶಕ್ತತೆಯಿಂದಲೋ, ಮಾನಸಿಕ ತುಮುಲದಿಂದಲೋ ಕೈಬಿಟ್ಟಿದ್ದ. ಚಹ ಚೆಲ್ಲಿ ಬಸಿ ಒಡೆದು ಚೂರಾಯಿತು. ಒಡೆದ ಚೂರುಗಳನ್ನು ಎತ್ತುವುದರೊಳಗೇ ಬಾಗಿಲಲ್ಲಿ ಟ್ಯಾಕ್ಸಿಯೊಂದು ಬಂದು ನಿಂತಿತು. ಅದರಿಂದ ಇಳಿದವಳು ಶ್ವೇತವಸನಧಾರಿಣಿಯಾದ ನನ್. ಸಾಮಾನ್ಯವಾಗಿ ಶಾಲೆ, ಕಾಲೇಜುಗಳಿಂದ ನನ್‌ಗಳು ಬರುತ್ತಿರುತ್ತಾದ್ದರಿಂದ ವಿಶೇಷವೆನಿಸಲಿಲ್ಲ ರೋಸಲಿನ್ನಳಿಗೆ. ತೆಳ್ಳಗೆ ಬಳುಕುವಂತಿದ್ದ ಅವಳು ನಗುಮುಖದಿಂದ ಒಳಬಂದಳು.

ಯಾರಿರಬಹುದು ?

ರೋಸಲಿನ್ನಳಿಗೆ ಆಶ್ಚರ್ಯ. ಒಂದೆರಡು ಕ್ಷಣ ಎವೆಯಿಕ್ಕದೆ ನೋಡಿದಳು.

"ಮಮ್ಮಾ! ನನ್ನ ಗುರುತು ಸಿಗಲಿಲ್ಲವೇ ? ನಾನು ಕ್ಯಾಥರೀನ್ !"

ಎರಡೂ ಕೈಗಳಿಂದ ಬಿಗಿದಪ್ಪಿದಳು ಕ್ಯಾಥರೀನ್ ತಾಯಿಯನ್ನು. ಆ ತಾಯಿಗೆ ಅರ್ಥೈಸಲಾರದಂತಹ ಆಶ್ಚರ್ಯ! ಅದರಲ್ಲೂ ತನ್ನ ಸಂಸಾರಕ್ಕೆ ಅತ್ಯಗತ್ಯವಾಗಿ ಬೇಕಾಗಿದ್ದ ಮಗಳು ನನ್ ಆಗಿ ಹೊರಟು ಹೋದರೆ ಮುಂದೆ ನಮ್ಮ ಗತಿ ?

ಆ ಪ್ರಶ್ನೆಯೆದ್ದಾಗ ಅಂತರತರವೆಲ್ಲಾ ವಿವರ್ಣವಾಯಿತು ರೋಸಲಿನ್ನಳಿಗೆ. ಆಗ ದುಂಡು ದುಂಡಗೆ ಮೈತುಂಬಿಕೊಂಡಿದ್ದ ಮಗಳು ಇಂದು ತೆಳ್ಳಗೆ ರಜತ ಶಲಾಕೆಯಂತಹ ಮೂರ್ತಿ! ನನ್ ವೇಶಧಾರಿಣಿ. ಅವಳು ಎರಡೂ ಕೈಗಳಿಂದ ಮಗಳನ್ನು ತಬ್ಬಿ ಹಿಡಿದುಕೊಂಡು ಒಂದೇ ಉಸಿರಿಗೆ ನುಡಿದಳು "ಎಂತಹ ಕೆಲಸ ಮಾಡಿಬಿಟ್ಟೆ ಮಗೂ ? ನನ್ನ ಒಂದು ಮಾತು ಕೇಳಲಿಲ್ಲವಲ್ಲ? ಇಲ್ಲಿನ ಪರಿಸ್ಥಿತಿಯನ್ನು ನೋಡಿದರೆ ಎದೆ ಒಡೆಯುತ್ತೆ !"

"ಬಿಡಿ ಅಮ್ಮಾ! ನಾವು ಬರುವಾಗ ಏನೂ ತರಲಿಲ್ಲ. ಹೋಗುವಾಗ ಏನೂ ಒಯ್ಯುವುದಿಲ್ಲ."

"ಆದರೂ.....!"

"ದೇವರಿದ್ದಾನೆ."

ಸೋಫದ ಮೇಲೆ ಮೈ ಚೆಲ್ಲಿ ಇತ್ತಲೇ ನೋಡುತಿದ್ದ ತಂದೆಯ ಕಡೆಗೆ ಜಿಗಿದಳು ಕ್ಯಾಥರೀನ್. ಆಗ....ಆಗ ರೋಸಲಿನ್ನಳಿಗೆ ತನ್ನ ತಾಯಿ ಹೇಳಿ ಕೊಂಡಿದ್ದ ಹರಕೆ ಚಿತ್ತ ಭಿತ್ತಿಯಮೇಲೆ ಸುಳಿದಳಿಯಿತು. ಎದೆಯಾಳದಿಂದ ನಿಟ್ಟುಸಿರೊಂದು ಹೊರ ಹಾಕಿದಳು. ಕಣ್ಣ ಮುಂದಿನ ವಸ್ತುಗಳೆಲ್ಲಾ ಒಂದೆರಡು ಕ್ಷಣ ಗರಗರನೆ ಸುತ್ತಿದಂತಾಯಿತು. ಸ್ತಂಭೀಭೂತಳಾದಳು ರೋಸಲಿನ್. ಮಾತೆ ಮೇರಿಯ ಮುಖದ ಮೇಲೆ ಹೂನಗೆ ಅರಳಿತ್ತು.



# ಡಾ|| ಮಣಿಮಾಲಾ

## ಅನಾಥೋ ದೈವ ರಕ್ಷಕಃ....

ರಂಗಪುರದ ಸಾಮಾನ್ಯ ಆಸ್ಪತ್ರೆಯಲ್ಲಿ ಈಚೆಗೆ ನೆಲೆನಿಂತು ಕೆಲಸ ಮಾಡಿದವಳು ಡಾ|| ಮಣಿಮಾಲ ಒಬ್ಬಳೇ. ಅದಕ್ಕೂ ಮೊದಲು ಬಂದ ಲೇಡಿ ಡಾಕ್ಟರುಗಳು ಅಲ್ಲಿಯ ವಾತಾವರಣ ಮತ್ತು ಪರಿಸರಕ್ಕೆ ಬೇಸರ ಪಟ್ಟು ಬಾಳಲಾರದೆ ಬೇರೆ ಸ್ಥಳಗಳಿಗೆ ವರ್ಗ ಮಾಡಿಸಿಕೊಂಡು ಹೋಗಿದ್ದರು-ಹೋಗುತಿದ್ದರು. ಇಡೀ ಹೋಬಳಿಗೆಲ್ಲಾ ಅದೊಂದೇ ಆಸ್ಪತ್ರೆಯಾದುದರಿಂದ ಸದಾಕಾಲವೂ ರೋಗಿಗಳಿಂದ ಗಿಜಿಗಿಜಿಮಯ. ಕೆಲಸ-ಕೆಲಸ, ಎಷ್ಟು ಮಾಡಿದರೂ ಮುಗಿಯದ ಕೆಲಸ. ಮುಗ್ಧ ಜನಕೋಟಿಯನ್ನು ನೋಡಿದರೆ 'ಒಲ್ಲೆ' ಎನ್ನಲೊಪ್ಪುವುದಿಲ್ಲ ಮನಸ್ಸು. ಕರ್ತವ್ಯ ಪ್ರಜ್ಞೆ ಇರುವವರಿಗೆ ಯಾವ ಊರಾದರೆ ಏನು ? ಎಂಬ ಪ್ರಶ್ನೆ ಸಿಮಿರಿ ನಿಲ್ಲುತ್ತದೆ ಹೃದಯ ನಿಕುಂಜದಲ್ಲಿ. ತನ್ನೆರಡು ಹೆಣ್ಣು ಮಕ್ಕಳನ್ನು ಅಲ್ಲಿನ ಶಾಲೆಗೆ ಸೇರಿಸಿಕೊಂಡು ತನ್ನವರಿಂದ ದೂರದೂರವಾಗಿಯೇ ಉಳಿದಳು ಡಾ|| ಮಣಿಮಾಲಾ. ರಂಗಪುರದಲ್ಲಿ ಡಾಕ್ಟರಿಣಿಯಾಗಿ ಸೇವೆ ಸಲ್ಲಿಸುತ್ತ ಐದಾರು ವರ್ಷಮಾನಗಳೇ ಸಂದು ಹೋದುವು.

ಎಷ್ಟೋ ಬಾರಿ ಹಳ್ಳಿಗಳಿಂದ ಕರೆ ಬರುತ್ತವೆ. ಸಾರಿಗೆ ಸೌಕರ್ಯವಿಲ್ಲದಿರುವುದರಿಂದ ನಡೆದುಕೊಂಡೇ ಹೋಗಬೇಕು. ಜೊತೆಗೆ ಆಸ್ಪತ್ರೆಯ ಸಿಬ್ಬಂದಿಯಲ್ಲಿ ಯಾರಾದರೂ ಇರುವುದರಿಂದ ಅಧೈರ್ಯ ನೈಮುದುಡಿ ಹಾದಿ ಸರಾಗವಾಗಿ ಸಾಗುತ್ತದೆ. ಡಾ|| ಮಣಿಮಾಲಾ ಧೈರ್ಯದಿಂದ ಹೆಜ್ಜೆ ಹೆಜ್ಜೆಯನ್ನು ಮುಂದಿಡುತ್ತಾಳೆ.

*  *  *  *

ನಿಶಿ-ಶಶಿ ಇಬ್ಬರೂ ಅವಳ ಮಕ್ಕಳು. ಒಂದೇ ರೂಪು; ಒಂದೇ ಧ್ವನಿ. ಹೊರಗಿನವರಿಗೆ ನಿಶಿಯಾರು? ಶಶಿಯಾರು? ಗುರುತಿಸುವುದು ಕಷ್ಟವೇ. ಹತ್ತು ವರ್ಷಗಳ ಸೊಂಪನ್ನುಂಡ ಮಕ್ಕಳು. ಸುಳಿಬಾಳೆಯಂತೆ ಬೆಳೆಯುತಿದ್ದರೆ ತಾಯಿಗೆ ಸಂತಸದ ಬದಲಾಗಿ ಮಕ್ಕಳ ಶ್ರೀರಕ್ಷೆಯನ್ನು ಕುರಿತು ಚಿಂತೆ. ತನ್ನವರಿಲ್ಲದ ಮನೆ. ಅಮಾಯಕ ಮಕ್ಕಳು. ತನ್ನ ಕಾಲವೆಲ್ಲಾ ಹೊರಗಡೆಯೇ ವ್ಯಯ ಎಂದ ಮೇಲೆ ಯೋಚನೆಯ ಗಾವರ ತಲೆಯನ್ನು ಚಿಟ್ಟು ಹಿಡಿಸುತ್ತದೆ. ಆದರೂ, ತನ್ನ ಭಾರವೆಲ್ಲಾ ದೇವರ ಮೇಲೆ. ಆ ಮಕ್ಕಳಿಗೂ ತಾಯಿ ಮನೆಯಲ್ಲಿರುವುದಿಲ್ಲವೆಂದು ಬೇಸರ-ಕಿನಿಸಿಗೆ.

ತಾನು ಒಳ-ಹೊರಗೆ ನಿರ್ವಹಿಸುವ ಕರ್ತವ್ಯಭಾರ ಕಷ್ಟ ಎನಿಸುವುದಿಲ್ಲ. ಮಾನಸಿಕ ಅಶಾಂತಿ ಪ್ರಾಣಹಿಂಸೆಗೆ ನಾಂದಿ. ತಾಯಿ ಚಿಂತಾಪರವಶಳಾಗಿದ್ದರೆ ಮಕ್ಕಳಿಗದು ಅರ್ಥವಾಗದ ವಿಷಯ. ಒಂದು ಕಾಲದಲ್ಲಿ ಈ ಜೀವನ ಇಷ್ಟು ದುರ್ಭರ ಎಂದು ಯಾರಾದರೂ ಹೇಳಿದ್ದಿದ್ದರೆ ನಂಬುತ್ತಿರಲಿಲ್ಲವೇನೋ. ಅಂದಿನ ಜೀವನನಿಷ್ಠೆ ಅಪಾರ. ಪುಟಪುಟಿಯುವ ಜೀವ. ಎಂದಿಗೂ ಸೋಲದ ಹುರುಪು.

ಇಂದು, ಆ ದಿನಗಳು ಕನಸಿನ ಚಿತ್ರಗಳು ಮಾತ್ರವೇ.

ಪರೀಕ್ಷೆಯಲ್ಲಿ ಒಳ್ಳೆಯ ನಂಬರ್ ತೆಗೆದುದರಿಂದ ಮೆಡಿಕಲ್ ಕಾಲೇಜಿನಲ್ಲಿ ಸೀಟು ಸುಲಭ ಲಭ್ಯ. ಮೆಡಿಕಲ್ ಕೋರ್ಸ್ ಮುಗಿಯುವವರೆಗೆ ತಂದೆ ಇದ್ದುದರಿಂದ ಓದಿಗೂ ಕಷ್ಟವಾಗಲಿಲ್ಲ.

ಅನಂತರ.....ಅನಂತರ ಅನುಭವಿಸಿದ ಮಾನಸಿಕ ಹಿಂಸೆ–ಪಟ್ಟ ಪಾಡು ನೆನೆಸಿಕೊಂಡರೆ ಈಗಲೂ ಎದೆ 'ಜಲ್' ಎನ್ನುತ್ತದೆ. ಕಾಡು ಮೃಗಗಳನ್ನು ನಂಬಬಹುದು ನರ ಮೃಗಗಳನ್ನು ನಂಬುವಂತಿಲ್ಲ.

* * * *

ಸಂಜೆಯ ತಣ್ಣನೆಯ ವಾತಾವರಣ. ತಂಗಾಳಿ ಸುಯ್ಯನೆ ಸುಯ್ದು ಮೈಮನಗಳನ್ನು ಮುದ್ದಿಸಿತು.

ಡಾ|| ಮಣಿಮಾಲಾ ಟೀಪಾಯಿಯ ಮೇಲಿದ್ದ ಮಾಸಿಕವನ್ನು ಕೈಗೆ ತೆಗೆದುಕೊಂಡಳು. ಬೆಳಿಗ್ಗೆ ಅವಸರದಲ್ಲಿರುವುದರಿಂದ ಪತ್ರಿಕೆಗಳ ಕಡೆ

ಗಮನ ಹೊರಳಿಸಲು ಸಮಯ ದೊರೆಯದು. ಬೆಳಗಿನ ಝಾವ ಎದ್ದು ಅಡಿಗೆ ತಿಂಡಿ ಮುಗಿಸಿಯೇ ಹೊರಡಬೇಕು ಆಸ್ಪತ್ರೆಗೆ. ಅಂದಮೇಲೆ, ಸಾಯಂಕಾಲವೇ ಬಿಡುವು.

ಮೊದಲ ಪುಟ ತೆರೆದಾಗ ಕಂಡ ಜಾಹೀರಾತಿನ ಚಿತ್ರ ಕಣ್ಮನ ಸೆಳೆಯಿತು. ಸುಂದರ ಉಡುಪುಗಳ ಜಾಹೀರಾತಿಗಾಗಿ ನಿಂತ ವ್ಯಕ್ತಿ ಡಾ|| ಸುರೇಶ್‌ನಂತೆಯೇ ಇದ್ದಾನೆ.

ಹಾ! ಒಮ್ಮೆಲೇ ಮನಸ್ಸಿಗೆ ಮುಳ್ಳು ಮುರಿದಂತಾಯಿತು !

ಮಾಸಿಕವನ್ನು ಹಾಗೇ ಮುಚ್ಚಿದಳು. ಮನಸ್ಸು ಸುರೇಶನ ಸುತ್ತ ಮುತ್ತ ಹರಿದಾಡಿತು. ಮೆಡಿಕಲ್ ಕಾಲೇಜಿಗೆ ಸೇರಿದಾಗಿನಿಂದ ಕೊನೆಯ ವರೆಗೂ ಒಡನಾಡಿ ಹೃದಯದ ಆಳವನ್ನು ಕಂಡುಕೊಂಡು ಜೀವನಭಾಗಿಯಾದ ಸಂದರ್ಭ ಚಲನಚಿತ್ರದಂತೆ ಮನೋಭಿತ್ತಿಯ ಮೇಲೆ ಸುಳಿಸುಳಿದಳಿಯ ತೊಡಗಿತು. ಆಗಣ ಅವನ ಪ್ರೇಮರಸಧಾರೆ ಜೇನಿಗಿಂತಲೂ ಸಿಹಿ. ಹಾಲಿಗಿಂತಲೂ ಸವಿ. ತಳಿರು ತೋರಣಗಳಡಿ ಒಡಮೂಡಿದ ದಾಂಪತ್ಯ ಜೀವನ ಕೊನೆಯ ಮುಹೂರ್ತದವರೆವಿಗೂ ತಳಿರಾಗಿಯೇ ಉಳಿದಿತ್ತು. ಡಾ|| ಸುರೇಶ ನಿಜವಾಗಿಯೂ ಶ್ರದ್ಧೆ-ನಿಷ್ಠೆಗಳಿಂದ ಕೂಡಿದ ವ್ಯಕ್ತಿ. ಆಗ ಅವನೊಡನೆ ಬಾಳಿದ ಕಾಲಮಾನ ಅಲ್ಪವೇ ಆದರೂ ಪಡೆದ ಸುಖಸೌಖ್ಯ ಅಪಾರ. ಅವನು ಅಲ್ಲಿ ಬಂದರೆ ಇಲ್ಲಿ ಸಂತಸದ ಮುಗುಳು ಅರಳುತಿತ್ತು ಹೃದಯ ಕುಂಡದಲ್ಲಿ. ಅವನ ಅಕ್ಕರೆಯ ಕರೆ 'ಮಣಿ-ಮಣಿ' ಯಲ್ಲಿ ಮಣಿಮಾಲೆ ಅಲುಗಿಸಿದಷ್ಟು ಮಧುರತೆ. ಹೂದಾನಿಗಳ ಹೂಗಳಲ್ಲಿ ಅರಳು ಮುಗುಳು. ಕಸೂತಿ ಕಲೆಯ ಹೂಗಳಲ್ಲಿ ಸುಗಂಧದ ಮುಗುಳು. ಗೋಡೆಯ ಮೇಲಿನ ಚಿತ್ತಾರಗಳಲ್ಲೂ ಆನಂದದ ಮುಗುಳು. ಮನೆಯೆಲ್ಲಾ ಆನಂದ ಭಾವಮಯ. ರಸಾನುಭೂತಿಮಯ. ಅದು ಕಾಮದ ಸಿಹಿಯೋ ಪ್ರೇಮದ ಸವಿಯೋ ಎಂಬುದನ್ನು ಈಗಲೂ ಊಹಿಸುವುದು ಕಷ್ಟವೇ. ದೇಹಗಳೆರಡಾದರೂ ಆತ್ಮವೊಂದೇ ಆಗಿ ಬಾಳಿದ ಆ ದಿನಗಳು..... ಅಸ್ಮರಣೀಯವಾದ ರಸಗಳಿಗೆಗಳು.....

ಒಂದು ವರ್ಷ-ಒಂದೇ ಒಂದು ವರ್ಷ ಜೀವನದ ದಿವ್ಯ ರಸಾನುಭವ ಈಗಲೂ ಮೈ ಪುಳಕಿತಗೊಳಿಸುತ್ತದೆ. ಅವನು ವಿದೇಶಕ್ಕೆ ಹೊರಟಾಗ ಆರು ತಿಂಗಳ ಗರ್ಭಿಣಿ ಡಾ|| ಮಣಿಮಾಲಾ.

ಅಂದು, ಹೊರಡುವ ಮುನ್ನಾದಿನ ರಾತ್ರಿ ಸೆಜ್ಜೆಯಲ್ಲಿ ತಬ್ಬಿ ಪುಟ್ಟ ಮಗುವಿನಂತೆ ಕಂಬನಿಗರೆದು ಪ್ರೇಮದ ಸವಿಯನ್ನು ಹೊರಚೆಲ್ಲಿ ನುಡಿದಿದ್ದ ಡಾ|| ಸುರೇಶ್.

"ನಿನ್ನ ಅಲ್ಪ ಕಾಲದ ಅಗಲಿಕೆಯನ್ನು ತಾಳಲಾರೆ ಮಣಿ! ನಿನ್ನನ್ನು ಕಾಣುವುದು ವರ್ಷವಾದರೂ ಆದೀತು! ಅಲ್ಲಿಯವರೆಗೆ ಹೇಗೆ ತಾಳಲಿ ?" ಎಂದು ಮುದ್ದಾಡಿದ್ದ. ವಿಮಾನದ ಮೆಟ್ಟಿಲೇರುವವರೆಗೂ ಅವನ ಜೀವ ವಿದ್ದುದು ಈ ಬಳಿಯಲ್ಲೇ. ಹಾ.....! ಅಂತಹ ವ್ಯಕ್ತಿ ತನ್ನನ್ನು ಮರೆತ ನೆಂದರೆ ಎಂತಹ ಆಶ್ಚರ್ಯ! ಪ್ರೇಮಮಯ ಜೀವನವನ್ನು ವಿಧಿ ಕವಲೊಡೆ ಸಿತು. ಯಾವ ಬಿಳೀ ಹುಡುಗಿ ಮೋಡಿ ಮಾಡಿದಳೋ ದೇವರಿಗೆ ಗೊತ್ತು! ಮೊದಮೊದಲು ಬರೆಯುತಿದ್ದ ಕಾಗದಗಳೆಲ್ಲಾ 'ಮಣಿ' ಮಯವಾಗಿರು ತಿದ್ದುವು. "ನಿನ್ನ ಆಗಮನವನ್ನು ಎದುರು ನೋಡುತ್ತಿರುವೆ. ನೀನಿಲ್ಲದೆ ನನ್ನ ಬಾಳು ಬರಿದು. ಕತ್ತಲಿಮಯ" ಎಂದು ಗೋಗರೆಯುತಿದ್ದುದು ಕೇವಲ ಆರು ತಿಂಗಳು ಮಾತ್ರ. ಅನಂತರ ಕಾಗದವೂ ಇಲ್ಲ. ವಿಳಾಸವೂ ಇಲ್ಲ! ಈ ಗಂಡು ಜಾತಿ.....! ಇವರಿಗೆ ಧರ್ಮಕರ್ಮ ಏನೇನೂ ಇಲ್ಲ. ಛೆಃ! ಮಾನವ ಸತ್ತರೆ ಚಿಂತೆಯಿಲ್ಲ, ಮಾನವೀಯತೆ ಸಾಯಬಾರದು.

ಚಿಂತನಾಭಾರದಿಂದ ಮ್ಲಾನಮುಖಿಯಾದಳು ಡಾ|| ಮಣಿಮಾಲ. ಮನಃಪಕ್ಷಿ ಸುರೇಶ.....ಸುರೇಶ ಮಂತ್ರವನ್ನು ಹಾಡುತ್ತಿರುವಾಗ ಹೃದಯ ಮೃದಂಗ ವ್ಯಾಪ್ತಿಗೆ ಮೀರಿ ಮಿಡಿಯಿತು. ಅವನಿಲ್ಲದೆ ಒಂದು ದಶಕವೇ ಕಳೆದಿದೆ. ಅವಳಿ ಮಕ್ಕಳ ಪಾಲನೆಯನ್ನು ಅತ್ಯಂತ ಶ್ರದ್ಧಾನಿಷ್ಠೆಗಳಿಂದ ನಿರ್ವಹಿಸಿದ್ದಾಳೆ. ಬದುಕಿನ ರಥ ಒಂದು ಚಕ್ರದಿಂದಲೇ ನಡೆಯುತ್ತಿದೆ. 'ಹೆದರಬಾರದು' ಎಂಬ ಧೋರಣೆ ಸದಾ ಬೆನ್ನು ತಟ್ಟುತ್ತಲೇ ಇರುತ್ತದೆ. ಹೆಜ್ಜೆ ಹೆಜ್ಜೆಯನ್ನೂ ತಪ್ಪಿ ಇಡದಷ್ಟು ಜಾಗ್ರತೆವಹಿಸುತ್ತಾಳೆ. ಆದರೂ, ಮಾನಸಿಕ ಪಕ್ಷಿ 'ಸುರೇಶ' ಮಂತ್ರವನ್ನು ಹಾಡುತ್ತಲೇ ಇರುತ್ತದೆ. ಬೇಡ ಬೇಡವೆಂದರೂ ಬಿಡುವುದೇ ಇಲ್ಲ. ಚಿಂತನಾವೇಶದ ಮುಳ್ಳು ಎಲ್ಲಿ ಯಾವಕಡೆಗೆ ತಿರುಗಿಸಿಟ್ಟರೂ ಅದು ಹೋಗಿ ನಿಲ್ಲುವುದು ಆ ದುರ್ದಾಂತ ಬಿಂದುವಿನಲ್ಲೇ. ಅವನು ನನ್ನನ್ನು ನೆನೆಯುತ್ತಿಲ್ಲ. ನಾನೇಕೆ ನೆನೆಯಲಿ? ಎಂಬ ಪ್ರಶ್ನೆಯೂ ಏಳುತ್ತಲೇ ಇರುತ್ತದೆ. ಆದರೆ, ಮನಸ್ಸು ಮನಸ್ಸೇ.

ಹೆಂಗರುಳು ಹೆಂಗರುಳೇ. ಕೆಲಸ ಮಾಡುವಾಗ ಹಾದಿ ನಡೆಯುವಾಗ 'ಸುರೇಶ' ಮೂರು ಅಕ್ಷರಗಳ ತಾರಕಮಂತ್ರ ತಲೆಯಲ್ಲಿ. ಒಮ್ಮೊಮ್ಮೆ ಜಿಗುಪ್ಸೆ-ಸಂಕಟಗಳಿಂದ ರೋಸಿ ಸಿಟ್ಟಿನಿಂದ ಈ ಮನಸ್ಸು ಕೈಗೆ ಸಿಕ್ಕುವಂತಿದ್ದರೆ ಹೊಸಕಿ ತೊಳೆದು ಬಿಡುತಿದ್ದೆ ಎಂದುಕೊಳ್ಳುವುದೂ ಉಂಟು. 'ಆದರೆ' ಈ ಜೀವನವೇ ಆದರೆ ಮಯ.

* * * *

ನಿಶಿ-ಶಶಿ ಎಡಬಲದಲ್ಲಿ ಮೈಗೆ ಮೈಹಚ್ಚಿ ಕುಳಿತಿದ್ದಾರೆ. ನೊಂದ ಜೀವಕ್ಕೆ ಆಧಾರಸ್ತಂಭಗಳಾದ ಮುಗ್ಧಮಕ್ಕಳನ್ನು ಗಮನಿಸಿದರೆ ಎಲ್ಲಾ ಬಗೆಯ ಕ್ಲೇಶಗಳೂ ದೂರ ಹಾರಿ ಅವರಿಗೆ ಆಧಾರವಾಗುವುದೊಂದೇ 'ಗುರಿ' ಎಂಬಾಸೆ ಗರಿಗೆದರುತ್ತದೆ. ಗೋಡೆಯಮೇಲೆ ಡಾ|| ಸುರೇಶನೊಂದಿಗೆ ಮದುವೆಯಲ್ಲಿ ತೆಗೆಸಿಕೊಂಡ ತನ್ನ ಫೋಟೋ. ಮಕ್ಕಳಿಗೆ ಆ ಫೋಟೋದ ಮೂಲಕವಷ್ಟೆ ತಂದೆಯ ಪೂರ್ಣ ಪರಿಚಯದರ್ಶನ. ತಂದೆ ಎಂದರೆ ಏನು ಎಂಬುದನ್ನು ಅರಿಯದ ಮಕ್ಕಳ ಬಗ್ಗೆ ಅಪಾರ ಅನುಕಂಪೆ. ಆದರೂ ಸಹ, ತನ್ನ ಪೂರ್ತಿ ಸಮಯವನ್ನು ಮಕ್ಕಳಿಗೆ ಮೀಸಲಿಡಲಾರದಂತಹ ಕಠಿಣ ಪರಿಸ್ಥಿತಿ. ಎಲ್ಲಾ ಸಂಕಟ ಸಂಕಷ್ಟವನ್ನು ನುಂಗಿಕೊಳ್ಳುತ್ತಲೇ ಒಂದು ದಶಕ ಉರುಳಿಹೋಯಿತು. ಇನ್ನೇನಿದ್ದರೂ ಊರ್ಧ್ವಮುಖೀ ಜೀವನ..... ಮತ್ತೇಕೆ ಹಿಂದಿರುಗಿ ನೋಡುವ ಹವ್ಯಾಸ.....? ಎನ್ನುತ್ತದೆ ಅಂತರಂಗದ ಪಕ್ಷಿ. ಆಗ ತನ್ನನ್ನು ತಾನೇ ಸಾವರಿಸಿಕೊಳ್ಳುತ್ತಾಳೆ ಡಾ|| ಮಣಿಮಾಲಾ.

"ಅಮ್ಮಾ! ನಿಮ್ಮ ಚಿಂತೆ-ವ್ಯಸನ ಎಲ್ಲಾ ವ್ಯರ್ಥ. ತಿಳಿದೂ ತಿಳಿದೂ ಮತ್ತೇಕೆ ಆರೋಗ್ಯಹಾನಿ ?"

ಮಕ್ಕಳ ಆ ಪ್ರಶ್ನೆಗೆ ಉತ್ತರಿಸುವುದು ಕಷ್ಟವೇ. ಪ್ರೇಮದ ಅರಿವು ಏನೇನೂ ಇಲ್ಲದ ಮಕ್ಕಳು.

"ಚಿಂತೆ ಏನಿಲ್ಲಮ್ಮಾ. ಈಚೀಚೆಗೆ ಯಾಕೋ ತುಂಬಾ ತಲೆನೋವು-ಕಣ್ಣುರಿ. ದಿನವೂ ಮಾತ್ರೆ ನುಂಗಿ ಸಾಕಾಗಿದೆ."

"ಡಾಕ್ಟರ್ ಅಂಕಲ್ಗೆ ಹೇಳಿದ್ದೀರಾ ?"

"ಹೌದು.....ಅವರು ಹೇಳಿದ ಮಾತ್ರೆಗಳೇ ಇವು."

"ಏನೂ ಉತ್ತರವು ತೋರುತಿಲ್ಲವೇ ?"

"ಯಾಕೋ ನನ್ನ ಗ್ರಹಗತಿ ಚೆನ್ನಾಗಿಲ್ಲ. ಒಂದಲ್ಲ, ಒಂದು ಗ್ರಹ ಚಾರ ಕಾಡುತ್ತಿರುತ್ತೆ."

ದನಿ ಎದೆಯಾಳದಿಂದ ಕಳಕಳಿಯನ್ನು ಪೂಸಿಕೊಂಡು ಹೊರಬಿತ್ತು.

"ಡಾಕ್ಟರ್ ಅಂಕಲ್ ಹೇಳುವುದು ನಿಮ್ಮನ್ನು ಚಿಂತೆಯೇ ಸುಡುತ್ತಿದೆ. ಎಂದು."

ಡಾ|| ಮಣಿಮಾಲಾ ಮಾತಾಡಲಿಲ್ಲ. ಸುಖದುಃಖಗಳು ಮೌನ ಗತಿಯಲ್ಲಿ ಹುಗಿದುಕೊಂಡಿದ್ದುವು ಎದೆಯಾಳದಲ್ಲಿ. ಮುಖಮುದ್ರೆ ಯಾವ ಉತ್ತರ ಹೇಳಿತೋ.....

"ಇಂದು ಮನೆಯಲ್ಲಿದ್ದು ಬಿಡಿ ಅಮ್ಮಾ! ಡಾಕ್ಟರ್ ಅಂಕಲ್ಗೆ ನಾನು ಹೇಳಿ ಬರುವೆ."

"ಅಷ್ಟೇನೂ ಕಷ್ಟವಾಗಿಲ್ಲ. ಇಂದು ಹೀಗೇ ಸುಧಾರಿಸಬಹುದು."

ಅವಳು ಮಕ್ಕಳನ್ನು ಮುದ್ದಿಸಿ ಆಸ್ಪತ್ರೆಯ ಕಡೆ ಹೊರಟಳು. ಭಾರವಾದ ಕಾಲುಗಳು ನಡೆಯಲಾರದೇ ನಡೆದುವು. ಮೆಟ್ಟಲಿಳಿಯುತ್ತ ಮತ್ತೆ ನುಡಿದಳು "ಮಕ್ಕಳೇ, ಹಳ್ಳಿಹಳ್ಳಿಗೆ ಕಾಲ್ನಡಿಗೆಯ ಪಯಣ. ಮನೆಯಲ್ಲಿ–ಆಸ್ಪತ್ರೆಯಲ್ಲಿ ಬಿಡುವಿಲ್ಲದ ಕೆಲಸ. ಮೇಲಾಗಿ, ಮಾನಸಿಕ ಪರಿತಾಪ ; ಆತ್ಮಿಕ ಹಿಂಸೆ. ನಾನು ಎಲ್ಲವನ್ನೂ ಸಹಿಸುತ್ತಿರುವುದು ನಿಮ್ಮ ಸರ್ವೋದ್ಧಾರಕ್ಕಾಗಿ. ನೀವು ಎಲ್ಲವನ್ನೂ ಅರ್ಥಮಾಡಿಕೊಂಡು ಚೆನ್ನಾಗಿ ಓದಿ ಮುಂದೆ ಬರಬೇಕು. ತಿಳಿಯಿತೇ ? ನೀವು ಓದಿನಲ್ಲಿ ಹಿಂದುಳಿದರೆ ನನ್ನ ಶ್ರಮ ವ್ಯರ್ಥ ಎಂಬುದನ್ನು ಮರೆಯಬಾರದು....ಇನ್ನು ನೀವಿಬ್ಬರೂ ಜವಾಬ್ದಾರಿ ಅರಿತು ಓದಿಕೊಳ್ಳದೇ ಹೋದರೆ ನಾನು ಸತ್ತೇ ಹೋದೇನು!"

ಈ ಮಾತಿಗೆ ಮಕ್ಕಳ ಮುಖ ಖಿನ್ನವಾಯಿತು. ಬಾಗಿಲಿಗೆ ವಾಲಿ ನಿಂತುಬಿಟ್ಟರು.

* * * *

ಆಸ್ಪತ್ರೆಯಿಂದ ಹಿಮ್ಮರಳಿದಾಗ ಬಹಳವಾಗಿ ಬಳಲಿದ್ದಳು ಡಾ|| ಮಣಿಮಾಲಾ. ಬೆಳಗಿನ ಅಡಿಗೆ ಮಿಕ್ಕಿದ್ದುದರಿಂದ ಪುನಃ ಅಡಿಗೆ ಮನೆಗೆ

ಹೋಗುವ ಪ್ರಸಂಗ ಬರಲಿಲ್ಲ. ಸುಮ್ಮನೆ ಹಾಸಿಗೆಯ ಮೇಲೆ ಆಡ್ಡಾದಳು ವಿಶ್ರಾಂತಿಗಾಗಿ.

"ಅಮ್ಮ, ನೀವು ಚಿಂತೆಯನ್ನು ಬದಿಗಿಟ್ಟರೆ ಅರ್ಧ ಸುಧಾರಿಸಿ ಕೊಳ್ಳುವಿರಿ. ಡಾಕ್ಟರ್ ಅಂಕಲ್ ಹೇಳುವುದು ಅದನ್ನೇ."

"ಇಲ್ಲಮ್ಮಾ, ನಾನು ಅಷ್ಟು ಮನಸ್ಸಿಗೆ ಹಚ್ಚಿಕೊಂಡಿಲ್ಲ. ಪ್ರಸಂಗೋಚಿತವಾಗಿ ವಿಷಯ ಹೊಮ್ಮುತ್ತದೆ ಅಷ್ಟೆ. ನಾನು ಕಷ್ಟ–ಸುಖಗಳನ್ನು ದೇವರಿಗೆ ಅರ್ಪಿಸಿರುವೆ. ಮತ್ತೆಲ್ಲಿಯ ದುಃಖ?" ತುಟಿಗಳು ನಸುನಗೆಯನ್ನು ಸೂಚಿಸಿದುವು.

ನಿಶಿ ಏನೋ ಹೇಳಲು ಪ್ರಯತ್ನಿಸಿ ಸುಮ್ಮನಾದಳು. ತಲೆಯಲ್ಲಿ ಕಾಣದ ತಂದೆಯ ಅಸಹ್ಯ ವರ್ತನೆ ತುಂಬಿ ಹೋಗಿತ್ತು.

ಶಶಿ ಒಂದೆರಡು ಗಳಿಗೆ ಯೋಚಿಸಿ ನುಡಿದಳು "ಬಹುಶಃ ಈ ಊರಿನ ಹವೆ ನಿಮಗೆ ಒಗ್ಗದಿರಬಹುದು ಅಥವಾ ಹಳ್ಳಿಹಳ್ಳಿ ತಿರುಗಿ ಅನ್ನಪಾನಾದಿಗಳು ವ್ಯತ್ಯಸ್ತವಾಗುವುದರಿಂದ ತೊಂದರೆಯಾಗಬಹುದು. ಬೇರೆ ಕಡೆಗೆ ವರ್ಗಮಾಡಿಸಿಕೊಳ್ಳಬಹುದಾಗಿತ್ತು."

"ನಿನಗೊತ್ತಿಲ್ಲ ಮಗಳೇ! ಸ್ವಜನರಿಂದ ಹೀಗೆ ದೂರವಿರುವುದು ಎಷ್ಟೋ ಕ್ಷೇಮ. ಹರಿತವಾದ ನಾಲಿಗೆಗಳಿಂದ ದೂರವಿದ್ದು ತಣ್ಣಗಿದ್ದೇವೆ. ನಮಗೆ ಬೇಕಾಗಿರುವುದು ಇಂತಹ ಶಾಂತಿ."

"ಹೋಗಲಿ ಬಿಡಿ. ನಿಮಗೆ ಇದೇ ಹಿತವಾದರೆ ಇಲ್ಲಿಯೇ ಇರೋಣ."

ಮರುದಿನ ಬೆಳಗ್ಗೆ ಏಳುವಾಗಲೇ ಕಣ್ಣುರಿ–ತಲೆನೋವು.

ಎಷ್ಟೇ ಕೆಲಸವಿದ್ದರೂ ಇರಲಿ. ಈ ದಿನವಂತೂ ಕೆಲಸ ಮಾಡಲಾರೆ ಎಂದುಕೊಂಡ ಡಾ॥ ಮಣಿಮಾಲಾ ರಜೆಗೆ ಬರೆದುಕೊಂಡ ಚೀಟಿಯನ್ನು ಆಸ್ಪತ್ರೆಗೆ ಕಳುಹಿಸಿಕೊಟ್ಟಳು.

ಡಾ॥ ರಾಮರಾವ್ ಬಂದು ನೋಡಿ ಔಷಧಿ ಕೊಟ್ಟು ಹೋದರು. ಅವರ ಔಷಧ ಸಹಾಯ ಮಾಡುತ್ತಿಲ್ಲ. ತಾಳಲಾರದೆ ಚೀರಿಡುವಂತಹ ನೋವು.....ಗೋಡೆಯಮೇಲೆ, ಮಾಡಿನಮೇಲೆ, ಎಲ್ಲಿ ದೃಷ್ಟಿ ಹರಿಸಿದರೂ ಅಲ್ಲಿ ಹಲ್ಕಿರಿದ ಸುರೇಶನ ಮುಖ ಬಿಂಬ! ಛೀ! ಎಂದು ಬೇರೆಡೆಗೆ ಮುಖ

ತಿರುವಿದರೆ ಅಲ್ಲಿಯೂ ಅದೇ ವಿಕೃತರೂಪ! ಬೇಸರ-ತಿರಸ್ಕಾರಗಳಿಂದ ಕಣ್ಣು ಮುಚ್ಚಿದಳು ಡಾ|| ಮಣಿಮಾಲಾ.

ಈ ಜಗತ್ತು ಇಷ್ಟೆ. ಯಾರಿಗೆ ಯಾರೂ ಅಲ್ಲ. ಕ್ಷಣಿಕ ಜೀವನ. ಎಂದಾದರೂ, ಯಾವ ಗಳಿಗೆಯಲ್ಲಾದರೂ ನೀರಿನ ಗುಳ್ಳೆಯಂತೆ ಒಡೆದು ಹೋಗುವುದು ಸತ್ಯ. ಮತ್ತೇಕೆ ಪರಿತಾಪ? ಹೆತ್ತ ತಪ್ಪಿಗೆ ಮಕ್ಕಳನ್ನು ದಡ ಹಚ್ಚಿದರೆ ಸಾಕು.....ಎಂಬುದು ಆತ್ಮ ಚಿಂತನೆ. ಒಡಲ ಹಾರೈಕೆ. ಅಂತಲೇ, ದಿನಚರಿ ಕುಂದಿಲ್ಲದಂತೆ ಸಾಗುತ್ತದೆ ಹಲವು ನೋವುಗಳನ್ನು ನುಂಗಿ.

* * * *

ತಲೆನೋವು.....ತಾಳಲಾರದ ನೋವು. ಕಣ್ಣುಗಳೂ ನೋವು. ಹಿಸುಕಿ ಹಿಂಸಿಸಿದಂತಹ ನೋವು. ಅಲ್ಲಿಯ ಚಿಕಿತ್ಸೆಯೆಲ್ಲಾ ಪೂರೈಸಿದ ಮೇಲೆ ಡಾಕ್ಟರೆಂದರು "ನೀವು ಇಲ್ಲಿಯೇ ಇದ್ದು ಬಿಟ್ಟರೆ ಕಷ್ಟವೇ. ಕಣ್ಣಿನ ಡಾಕ್ಟರ ಬಳಿಗೆ ಹೋಗುವುದು ಒಳ್ಳೆಯದು. ನೀವೇ ಡಾಕ್ಟರಾಗಿ ಉದಾಸೀನ ಮಾಡುವುದು ಸರಿಯಲ್ಲ."

ಆ ಮಾತನ್ನು ಡಾ|| ರಾಮರಾವ್ ಪದೇ ಪದೇ ಹೇಳುತಿದ್ದಾರೆ.

ರಂಗಪುರದಲ್ಲಿ ಒಂದು ಹಾಸ್ಟಲ್ಲೂ ಇಲ್ಲ. ಮಕ್ಕಳನ್ನು ಎಲ್ಲಿ ಬಿಟ್ಟು ಹೋಗಲಿ? ಕರೆದುಕೊಂಡು ಹೋದರೆ ಶಾಲೆಗೆ ವಿದಾಯ. ಅದೂ ಅಲ್ಲದೆ ಚಿಕಿತ್ಸೆ ಎಷ್ಟುದಿನ ತೆಗೆದುಕೊಳ್ಳುತ್ತೊ ಎಂಬ ಯೋಚನೆ ಬೇರೆ. ನಾನಾ ಚಿಂತೆಗಳು ಹೃದಯವನ್ನು ಕಾಣದ ಕೈಗಳಿಂದ ಹಿಸುಕುತ್ತವೆ; ಒಡಲ ಬಳ್ಳಿಯನ್ನು ಕಟ್ ಕಟ್ಟನೆ ಕತ್ತರಿಸುವಂತೆ.

ಡಾ|| ರಾಮರಾವ್ ಮಕ್ಕಳನ್ನು ತಮ್ಮಲ್ಲಿ ಬಿಟ್ಟು ಹೋಗಿ ಬನ್ನಿ ಎನ್ನುತ್ತಲೇ ಇದ್ದಾರೆ. ಅವರ ಸಹಕಾರ ಪುಣ್ಯವೆ. ನನಗೆ ಸಂಕೋಚ. ಆದರೆ, ವಿಧಿಯಿಲ್ಲ. ಈಸಲಿ ಹೋಗಿ ಕಣ್ಣಿನ ಡಾಕ್ಟರನ್ನು ಕಂಡು ಬರುವೆ ಎಂದುಕೊಂಡಾಗಲೇ ಮಕ್ಕಳು ಶಾಲೆಯಿಂದ ಓಡುತ್ತಲೇ ಬಂದರು. ಮೈಯೆಲ್ಲಾ ನಿಗಿನಿಗಿ ನಲಿಯುವ ಉತ್ಸಾಹ. ತಾಯಿಯ ಸ್ಥಿತಿ ನೋಡುತ್ತಲೂ ನದಿಯುಬ್ಬರವಿಳಿದಂತೆ ಜರ್ರನೆ ಇಳಿದುಹೋಯಿತು. ಮಕ್ಕಳಿಬ್ಬರೂ ಸಪ್ಪೆ ಮುಖದಿಂದ ನೋಡುತ್ತ ನಿಂತುಬಿಟ್ಟರು.

"ಮಕ್ಕಳೇ, ಡಾ || ರಾಮರಾವ್ ಮನೆಯಲ್ಲಿ ನೀವು ಕೆಲವು ದಿನ ಇರಬೇಕಾಗುತ್ತೆ. ನಾನು ತಾಳಲಾರೆ. ಇಂದು ಕೆಲಸಕ್ಕೂ ಹೋಗಲಿಲ್ಲ....."

"ಅಮ್ಮಾ.....!" ತಾಯಿಯನ್ನು ತಬ್ಬಿ ಗೋಗರೆದರು ಮಕ್ಕಳು.

"ನೀವು ಹಾಗೆಲ್ಲಾ ಹಠ ಮಾಡಿದರೆ ನಾನು ಸಾಯ್ತೀನಿ ಅಷ್ಟೆ."

ಇಬ್ಬರೂ ತಾಯಿಯನ್ನು ತಬ್ಬಿ ಮುಸಿಮುಸಿ ಅತ್ತರು.

* * * *

ಡಾ|| ಮಣಿಮಾಲಾ ಬೆಂಗಳೂರು ಸೇರಿ ಕಣ್ಣಿನ ಡಾಕ್ಟರಿಂದ ಡಾಕ್ಟರಿಗೆ ಅಲೆದು ಅತ್ಯುತ್ತಮ ಚಿಕಿತ್ಸೆ ಪಡೆದುಕೊಂಡರೂ ಒಂದು ದುರ್ದಿನದಲ್ಲಿ ಬೆಳಗಾಗೆದ್ದರೆ ಎರಡೂ ಕಣ್ಣುಗಳಲ್ಲೂ ಬೆಳಕು ನಂದಿ ಹೋಗಿತ್ತು !

ಹಾ.....! ಡಾಕ್ಟರಾಗಿಯೂ ಅನುಭವಿಸಿದ ದಾರುಣ ದುಃಖ ಯಾವ ದೈವಕ್ಕೆ ಪ್ರೀತಿಯೋ.....ಅಳುತ್ತೇನೆಂದರೆ ಆ ಕಣ್ಣುಗಳಿಗೇ ಧಕ್ಕೆ !

ಡಾಕ್ಟರೆನ್ನುವುದು "ಪೂರ್ತಿ ಕಣ್ಣುಹೋಯಿತೆಂದು ತಿಳಿದುಕೊಳ್ಳಬೇಡಿ. ಎಂದಾದರೂ ಕಣ್ಬೆಳಕು ಪುನಃ ಪ್ರಾಪ್ತಿಯಾದೀತು. ಅದಕ್ಕೆ ಸ್ವಲ್ಪವೂ ಕುಂದದ ನಿಮ್ಮ ಕಣ್ಣಾಲಿಗಳೇ ಸಾಕ್ಷಿ."

ಆ ಆಶ್ವಾಸನೆ ಎದೆಯ ಮಿಡಿತವನ್ನು ಇನ್ನೂ ಮಿಡಿಸುತ್ತಲಿದೆ. ಹೇಗೋ ಹಾಗೆ ತನ್ನನ್ನು ಸಾವರಿಸಿಕೊಂಡು ತನ್ನ ಸೋದರಿಯ ಸಹಾಯದಿಂದ ರಂಗಪುರ ಸೇರಿದಳು. ಡಾ|| ರಾಮರಾಯರ ಮನೆಯಲ್ಲಿ ವಾಸ್ತವ್ಯ ಪಡೆದಿದ್ದ ಮಕ್ಕಳು ತಾಯಿಯ ಆಗಮನದ ಸುದ್ದಿ ಮುಟ್ಟುತ್ತಲೂ ಓಡೋಡಿ ಬಂದರು. ಒಟ್ಟಿಗೇ ಮೈಮೇಲೆ ಬಿದ್ದ ಮಕ್ಕಳನ್ನು ಎರಡೂ ಕೈಗಳಿಂದ ಆಲಂಗಿಸಿಕೊಂಡು ಮುದ್ದಿಟ್ಟಳು ತಾಯಿ. ಆದರೆ, ನಿಶಿ ಯಾರು ? ಶಶಿ ಯಾರು ? ತಿಳಿಯಲಿಲ್ಲ ಕೂಡ.

ಡಾ|| ಮಣಿಮಾಲಾ ವ್ಯಾಪ್ತಿಗೆ ಮೀರಿ ಮಿಡಿಯುತಿದ್ದ ಹೃದಯವನ್ನು ಒತ್ತಿ ಹಿಡಿದುಕೊಂಡು ತನ್ನನ್ನು ತಾನೇ ಸುಧಾರಿಸಿಕೊಳ್ಳಲು ಸರ್ವ ಸಾಹಸ ಪ್ರಯತ್ನಿಸಿದರೂ ಕಟ್ಟೆಯೊಡೆದ ನದಿಯಂತಾಯಿತು ದುಃಖ.

ಬಳಿಯಲ್ಲಿದ್ದ ಸೋದರಿ, ಡಾ|| ರಾಮರಾವ್ ಮತ್ತು ಅವರ ಕುಟುಂಬ ಒತ್ತಾಯ ಪೂರ್ವಕವಾಗಿ ಸಂತೈಸಿದರು, ಅನಂತರ....ಅನಂತರ ಸಂಕಟಬಂದಾಗ ಅಳುವಷ್ಟು ಹೊತ್ತು ಅತ್ತು ನಿಧಾನಿಸಿ ವೇದಾಂತ ಹೇಳು

ವವರಂತಾಯಿತು ತನ್ನ ಪರಿಸ್ಥಿತಿ. ಮರುದಿನದಿಂದಲೇ ಆಸ್ಪತ್ರೆಯ ಕೆಲಸಕ್ಕೆ ಅಣಿಯಾದಳು ಅವಳು. ಆಸ್ಪತ್ರೆಯ ನಿವೃತ್ತ ದಾದಿಯೊಬ್ಬಳು ಮನೆಗೆ ನೇಮಕವಾಳು. ಎಲ್ಲಾ ಬಗೆಯ Care-taker ಆಗಿ ಆವಳು ಕೆಲಸ ನಿರ್ವಹಿಸಿದುದರಿಂದ ಕೆಲಸ ಕಾರ್ಯ ಕುಂಟುತ್ತ ಸಾಗಿತು.

* * * *

ಅಂದಿಂದಿಗೂ ವರ್ಷಮಾನವೇ ಉರುಳಿತು. ಕಣ್ಬೆಳಕು ಏನೇನೂ ಸುಧಾರಿಸಲಿಲ್ಲ. ಮನೆಯ ಖರ್ಚುವೆಚ್ಚ ಹದ್ದು ಮೀರುತ್ತಿದೆ. ಹೀಗಾದರೆ ಮುಂದೆ ಭವಿಷ್ಯದ ಕತೆಯೇನು? ಎಂಬ ಪ್ರಶ್ನೆ ನಿತ್ಯ ತಲೆಯನ್ನು ಕೋರೈಸುವ ಕೀಟ. ಡಾ|| ರಾಮರಾಯರ ಕುಟುಂಬ ಆಗಾಗ ಬಂದು ಉಗ್ರಾಣ ಅಡುಗೆ ಮನೆಯ ವ್ಯವಸ್ಥೆಯನ್ನು ಪರಿಶೀಲಿಸಿ ಹದ್ದುಮೀರುವಿಕೆಗೆ ಅಲ್ಪ ಸ್ವಲ್ಪ ತಡೆ ಹಾಕುವುದುಂಟು. ಆದರೂ, ಹಿಂದಿನಂತಲ್ಲ ಈ ದಿನಗಳು. ನಿಶಿ ಶಶಿಯರೂ ತಮ್ಮ ಬುದ್ಧಿಶಕ್ತಿಯನ್ನು ಅತ್ತ ಹೊರಳಿಸಿದರೂ ತೀರಾ ಬಿಗಿಗೊಳಿಸುವುದು ಕಷ್ಟವೇ. ಅಸಹಾಯಕ ಪರಿಸ್ಥಿತಿಯಲ್ಲಿ ಅಷ್ಟಾದರೂ ನಿರ್ವಹಣೆ ಒದಗಿ ಬಂದುದು ವಿಶೇಷವೇ.....ಎಂಬುದು ದೊಡ್ಡ ಸಮಾಧಾನ. ಹೃನ್ಮನಗಳನ್ನು ಸಾಂತ್ವನಗೊಳಿಸುವ ಅನುಬಂಧ.

ತಾಯಿ-ತಂದೆ ಸ್ವರ್ಗಸ್ಥರಾಗಿ ಎಂದೋ....ಅಣ್ಣಂದಿರಿಗೆ ಸ್ವಾರ್ಥವೇ ಪರಮಾರ್ಥ. ಬಡ ತಂಗಿಯೊಬ್ಬಳಿದ್ದರೆ ಅವಳ ಜೀವನವೇ ಭಾರ ಅವಳಿಗೆ. ಇತಿಮಧ್ಯೆ, ದುರ್ವಿಧಿ ಕಣ್ಬೆಳಕನ್ನು ನಂದಿಸಬೇಕೆ ? ತನ್ನವರಿಲ್ಲದಿದ್ದರೂ ರಂಗಪುರದಲ್ಲಿ ಜೀವನ ಸರಾಗದಿಂದಲೇ ಸಾಗುತ್ತಿದೆ. ಕಣ್ಣಿಗೆ ಧಕ್ಕೆಯಾಗದಿದ್ದರೆ ಜೀವನಕ್ಕೆ ಹೆದರುತ್ತಿರಲಿಲ್ಲ. ನನ್ನ ದೌರ್ಭಾಗ್ಯ ಹಾದಿಗೆ ಮುಳ್ಳು ನೆಟ್ಟಿತು. ಹೇಗೆ ಹೆಣ್ಣು ಮಕ್ಕಳನ್ನು ಸರಿದಾರಿಯಲ್ಲಿ ನಡೆಸಲಿ ? ನನಗೇಕೆ ಇಂಥ ದುರವಸ್ಥೆ ಬಂತು ? ಯಾವ ಜನ್ಮದ ಪಾಪ-ಕರ್ಮವೋ ನನ ಬೆನ್ನೊತ್ತಿ ಬಂದಿದೆ. ಜೀವ ಕಳೆದುಕೊಳ್ಳೋಣವೆಂದರೆ ಮಕ್ಕಳ ಗತಿ ಯೇನು ?.... ಎಂದು ಹಗಲೂ ರಾತ್ರಿ ನರಳುತ್ತದೆ, ನೊಂದ ಜೀವ. ಡಾ|| ರಾಮರಾವ್ "ಬಿಡಿ ಡಾಕ್ಟರ್ ! ಇದಕ್ಕಾಗಿ ಹೆದರಬೇಕಾಗಿಲ್ಲ ವಿಧಿಗೆ ಸವಾಲು ಹಾಕಿ ಬದುಕಬೇಕು. ಇಲ್ಲಿ ನಿಮ್ಮ ಜೀವನ ನಿರ್ವಹಣೆ ನಿಮಗೆ ಅಸಾಧ್ಯ ಎನಿಸಿದರೆ ಉದ್ಯೋಗಿ ಮಹಿಳೆಯರ ಹಾಸ್ಟಲ್ ಇದ್ದ ಕಡೆ ವರ್ಗ

ಮಾಡಿಸಿಕೊಂಡರೆ ಮಕ್ಕಳನ್ನು ಅಲ್ಲಿಯೇ ಇಟ್ಟುಕೊಳ್ಳಬಹುದು. ಒಬ್ಬ ನುರಿತ ಕಾರ್ಯದರ್ಶಿನಿಯನ್ನು ನಿಯಮಿಸಿಕೊಂಡರಾಯ್ತು. ಇಷ್ಟಕ್ಕಾಗಿ ಖಂಡಿತ ಮನಸ್ಸು ಕೆಡಿಸಿಕೊಂಡು ಚಿಂತೆ ಮಾಡಬೇಡಿ- ಈಗ ಹೇಗೂ ದಾದಿಯ ಸಹಾಯದಿಂದ ಕೆಲಸ ನಡೆಯುತ್ತಿಲ್ಲವೇ ? ಹಾಗೆಯೇ ಮುಂದೆಯೂ" ಎಂದು ಸ್ಫೂರ್ತಿದಾಯಕವಾಗಿ ಉತ್ತೇಜನ ನೀಡುತಿದ್ದರೆ ಮೈ ಹುರುಪುಗೊಂಡು ಮನಸ್ಸು ಅರಳುತ್ತದೆ. ಚಿಂತೆಯನ್ನು ಬದಿಗೊತ್ತಿ ಕೆಲಸ ನಿರ್ವಹಿಸುತ್ತಾಳೆ. ಆಸ್ಪತ್ರೆ ದಾದಿಯ ಕೈಹಿಡಿದುಕೊಂಡು ಹೋಗಿ ರೋಗಿಗಳ ದೈಹಿಕ ಪರೀಕ್ಷೆ ನಡೆಸಿ ವಿದ್ಯುಕ್ತವಾಗಿ ಕೆಲಸ ನಿರ್ವಹಿಸುವುದು ರೂಢಿಯಾಗುತ್ತಿದೆ. ದುರ್ವಿಧಿಯ ಸವಾಲಿಗೆ ಸವಾಲೊಡ್ಡಿ ದಿನಗಳೆಯುತ್ತಾಳೆ ಡಾ॥ ಮಣಿಮಾಲಾ.

* * * *

ಹಿಂದೆಲ್ಲಾ ಕಿಟಕಿಯಲ್ಲಿ ಮೊಗವಿಟ್ಟು ದೂರ ಬೆಟ್ಟದ ಮೇಲೆ ರಂಗ ವಿಠ್ಠಲನ ದೇವಸ್ಥಾನದ-ಪ್ರಾಂಗಣದಲ್ಲಿ ಬೆಳಗುತಿದ್ದ ವಿದ್ಯುದ್ದೀಪಗಳ ಕಡೆಗೆ ದೃಷ್ಟಿಯನ್ನು ಚೆಲ್ಲಿಕೊಟ್ಟು ರಂಗವಿಠ್ಠಲನ ವೈಭವವನ್ನು ಮನಕ್ಕೆ ತುಂಬಿಕೊಳ್ಳುತಿದ್ದುದುಂಟು. ಅದೇ ಅಭ್ಯಾಸ ಬಲದಿಂದ ಕಿಟಕಿಯ ಬಳಿಗೆ ಈಗಲೂ ಹೋಗಿ ಬರುವುದುಂಟು, ಕತ್ತಲೆಯನ್ನು ನಿಟ್ಟಿಸುವಂತೆ.

ರಾತ್ರಿ ಎಷ್ಟೊತ್ತಾದರೂ ನಿದ್ದೆಯ ಸುಳಿವಿಲ್ಲ. ಎಡಬಲದಲ್ಲಿ ಮಲಗಿದ್ದ ನಿಶಿ-ಶಶಿ ಇಬ್ಬರೂ ಗಾಢನಿದ್ದೆಯಲ್ಲಿದ್ದಾರೆ. ನಿದ್ದೆಯಿಲ್ಲದ ರಾತ್ರಿಯನ್ನು ಕಳೆವ ಕಷ್ಟ ಹೇಳತೀರದು. ಕಣ್ಣುಗಳಲ್ಲಿ ಬೆಳಕಿಲ್ಲದೆ ಪುಸ್ತಕ ಪಠಣ ಮತ್ತೊಂದು ಮಗದೊಂದು ಯಾವುದೂ ಇಲ್ಲ. ಅತ್ತಿಂದಿತ್ತ ಹೊರಳಿ ಮಲಗುವುದೊಂದೇ ದಾರಿ ಬೇಸರ ಕಳೆಯಲು.

ಅದೇ ರಂಗನ ಬೆಟ್ಟ. ಅದೇ ಏರು ಮುಖವಾದ ಹಾದಿ.

ಡಾ॥ ಮಣಿಮಾಲ ಬೆಟ್ಟದ ಹಾದಿಯನ್ನು ಏಕಾಂಗಿಯಾಗಿ ನಡೆಯುತಿದ್ದಾಳೆ ರಂಗವಿಠ್ಠಲನ ದಿವ್ಯ ದರ್ಶನಕ್ಕಾಗಿ. ದೇವಸ್ಥಾನವನ್ನು ಮುಟ್ಟಿದಾಗ ಜಗಜಗಿಸುವ ವಿದ್ಯುದ್ದೀಪಗಳ ಬೆಳಕಿನಲ್ಲಿಯೂ ರಂಗವಿಠ್ಠಲನ ದರ್ಶನವಾಗದೆ ಚಡಪಡಿಸುತ್ತಿವೆ ನಯನದ್ವಯಗಳು. ಡಾ॥ ಮಣಿಮಾಲಾ ಎಷ್ಟೆಷ್ಟು ಪ್ರಯತ್ನಿಸಿದರೂ ಮೂರ್ತಿ ಕಾಣಿಸದು. ಈಗಲೇ ಈ ಕಣ್ಣಾಲಿಗಳನ್ನು ಕಿತ್ತೊಗೆಯಲೇ ಎಂಬಷ್ಟು ಪರಿತಾಪ ಮನದಲ್ಲಿ.

ಅರ್ಚಕರು ಮುಂದಾಗಿ ಕೈಯಲ್ಲಿ ಪ್ರಸಾದದ ತಟ್ಟೆ ಹಿಡಿದು "ಅಮ್ಮಾ ತಾಯಿ ! ತಗೊಳ್ಳಿ ಈ ಪ್ರಸಾದ. ಇದು ದೇವಸ್ಥಾನದ ಮದನ ಮಂಜರಿ ಪುಷ್ಪ. ಹನ್ನೆರಡು ವರ್ಷಗಳಿಗೊಮ್ಮೆ ಒಂದೆರಡು ಹೂ ಬಿಡುತ್ತದೆ. ಈ ಹೂವು ತುಂಬಾ ಪ್ರಭಾವಶಾಲಿಯಾದುದು. ಎಂತೆಂತಹ ಕಾಹಿಲೆಗಳನ್ನು ಗುಣಪಡಿಸುತ್ತದೆ.....? ದೈವಾನುಗ್ರಹವಿದ್ದರೆ ನಿಮ್ಮ ಕಣ್ಣಿಗೆ ದೃಷ್ಟಿಬರಬಹುದು. ದೇವರಿಗೆ ಪ್ರಾರ್ಥಿಸಿ ಕಣ್ಣುಗಳಿಗೆ ಒತ್ತಿಕೊಳ್ಳಿ !"

ಆ ಆಶ್ವಾಸನೆ ಎಷ್ಟೊಂದು ಪ್ರಿಯವಾಗಿತ್ತೊ ಅದನ್ನು. ಅವಳ ಮನಸ್ಸು ಮಾತ್ರ ಬಲ್ಲದು. ಅವಳು ಆಕ್ಷಣವೇ ಪ್ರಾಂಜಲಿಯೊಡ್ಡಿದಳು. ಘಮ ಘಮಿಸುವ ಹೂ ತಣ್ಣಗಿತ್ತು

ಎರಡೂ ಕಣ್ಣುಗಳಿಗೆ ಒತ್ತಿಕೊಂಡಳು. ಒಮ್ಮೆಲೇ ಅಂತರಂಗವೆಲ್ಲಾ ತಣ್ಣಗಾಯ್ತು ಮಂಜಿನ ಕುಂಡದಲ್ಲಿ ಮುಳುಗೆದ್ದಂತೆ.

ತಟ್ಟನೆ ಎಚ್ಚರವಾಯಿತು. ನಿಜವಾಗಿಯೂ ಕಣ್ಣು ಮುಖಗಳು ತಣ್ಣಗೆ!

ಚಿತ್ತ ಭಿತ್ತಿಯಲ್ಲಿ ಜೀವನದ ಕಹಿ-ಸಿಹಿಗಳು ಚಲನ ಚಿತ್ರದಂತೆ ಸುಳಿ ಸುಳಿಯ ತೊಡಗಿದುವು. ಹೃದಯ ಕುಂಡ ಕಲ್ಲು ಹೊತ್ತಷ್ಟು ಭಾರಾತಿ ಭಾರ. ಕೂಡಲೇ ತನುಮನಗಳು ತಟಸ್ಥವಾದುವು.

*   *   *   *

ಇನ್ನೂ ಆಸ್ಪತ್ರೆಗೆ ಅಣಿಯಾಗುತ್ತಿರುವಾಗಲೇ ಬೆಳ್ಳಿಯ ಗಡ್ಡದ ವೃದ್ಧ ಮಹಾಶಯ ಆಗಮಿಸಿದ. ಹಣೆಯಲ್ಲಿ ಶ್ರೀಗಂಧ ತಿಲಕ. ಕೊರಳಲ್ಲಿ ಸ್ಫಟಿಕ ಮಾಲೆ ಧರಿಸಿದ ಆತ ಭವ್ಯ ಶರೀರಿ. ಕಣ್ಣುಗಳು ಉಲ್ಕೆಗಳಂತೆ ಬೆಳಗುತ್ತಿವೆ. ಧವಳಕೀರ್ತಿಯಂತೆ ತೊಳಗುವ ಶ್ವೇತವಸನಧಾರಿ..... ಆಶೀರ್ವಚನಗಳ ಸಹಿತ ಮೆಟ್ಟಿಲು ಹತ್ತಿದ.

ಡಾ|| ಅಮ್ಮಣ್ಣಿ ಇದ್ದಾರೆಯೇ ?"

ಧ್ವನಿ ಕೇಳಿ ಡಾ|| ಮಣಿಮಾಲಾ ಹೊರಬಂದಳು. ಕಣ್ಣಿಗೆ ಕಪ್ಪು ಕನ್ನಡಕ. ಬಿಳಿಯ ಸೀರೆ ಕುರ್ಚಿ ಬಾಗಿಲುಗಳನ್ನು ಕೈಯಿಂದ ತಡವುತ್ತ ಹೊರಬಂದಳು. ಮುಖದಲ್ಲಿನ ಮ್ಲಾನ ಕಳೆಯನ್ನು ದಯಾಪೂರ್ಣ ದೃಷ್ಟಿಯಿಂದ ನಿಟ್ಟಿಸಿ ನೋಡಿದ ಸನ್ಯಾಸಿ.

"ನಮಸ್ಕಾರ ! ನಮಸ್ಕಾರ !" ಕೈ ಜೋಡಿಸಿದಳು ಅವಳು.

"ನಮಸ್ಕಾರ ತಾಯಿ ! ನಿನಗಾಗಿ ಪ್ರಸಾದ ತಂದಿರುವೆ !"

"ತುಂಬಾ ವಂದನೆಗಳು !" ಎನ್ನುತ್ತ ಪ್ರಾಂಜಲಿಯೊಡ್ಡಿದಳು ಮಣಿಮಾಲಾ.

ಸನ್ಯಾಸಿ ಅವಳ ಕೈಗೆ ಪ್ರಸಾದವಿಟ್ಟು ನಲ್ಮೆಯಿಂದ ನುಡಿದ,

"ನೀನು ಜನಸೇವಾ ವೃತ್ತಿ ಕೈಕೊಂಡು ದೃಷ್ಟಿಯಿಲ್ಲದೆ ನರಳುವುದು, ಹೆಣ್ಣುಮಕ್ಕಳ ತಾಯಿಯಾಗಿ ಕಣ್ಣಿಲ್ಲದೆ ಗೋಳಾಡುವುದು ತೀರಾ ದುರದೃಷ್ಟ. ಇದೋ, ಮಗಳೇ ! ನೀನು ಏಕಿಷ್ಟು ತೊಂದರೆ ಪಡಬೇಕು? ನಿನಗಾಗಿಯೇ ಈ ಅಮೃತ ತಂದಿರುವೆ. ಆ ಕಣ್ಣಿಗೊಂದು ತೊಟ್ಟು. ಈ ಕಣ್ಣಿಗೊಂದು ತೊಟ್ಟು. ನಾಳೆಯಿಂದ ನಿನ್ನ ಕಣ್ಣುಗಳು ಬೆಳಕು ನೋಡುತ್ತವೆ."

ಅವಳನ್ನು ಮಲಗಲು ಹೇಳಿ ಎರಡೂ ಕಣ್ಣುಗಳಿಗೆ ಕಮಂಡಲುವಿನಿಂದ ನೀರು ಹನಿಸಿದ. ಹಾ ! ಎಷ್ಟು ತಣ್ಣಗೆ ! ಶೀತ ದೇಶದ ಶೈತ್ಯಕ್ಕಿಂತಲೂ ತಣ್ಣಗೆ ! ಪ್ರಯತ್ನಿಸಿದರೂ ಕಣ್ಣುಗಳನ್ನು ತೆರೆಯಲಾಗಲಿಲ್ಲ. ರೆಪ್ಪೆಗಳನ್ನು ಗೋಂದಿನಿಂದ ಅಂಟಿಸಿದಂತೆ, ದಾರದಿಂದ ಹೊಲಿದಂತೆ ಬಿಗಿದುಕೊಂಡಿವೆ. ಕೈಲಿದ್ದ ಪ್ರಸಾದದ ಹೂವಿನಿಂದ ಕಣ್ಣುಗಳಿಗೆ ಒತ್ತಿಕೊಳ್ಳುತ್ತ ಮಲಗಿದಳು.

"ಅಮ್ಮಾ! ಈ ಸನ್ಯಾಸಿಗಳು ಈ ಊರಿನವರಲ್ಲ. ಈ ಸಣ್ಣ ಊರಿನಲ್ಲಿ ನಾನೆಂದೂ ಅವರನ್ನು ಕಂಡೇ ಇಲ್ಲ. ಎಲ್ಲೋ ದೂರದಿಂದ ಬಂದಿರಬೇಕು ! ನಿಮ್ಮನ್ನು ಆಶೀರ್ವದಿಸುವುದಕ್ಕೇ ಬಂದರೇನೋ...." ಎಂದಳು ದಾದಿ ಭಾವುಕತೆಯಿಂದ.

"ದೇವರು ದೊಡ್ಡವನು. ಅವರ ಆಶೀರ್ವಾದ ಫಲಿಸಿದರೆ ಸಾಕು." ಎಂದಳು ಡಾ|| ಮಣಿಮಾಲಾ. ಎದೆಯಾಳದಲ್ಲಿ ಏನೋ ಒಂದು ಬಗೆಯ ಎಂದೂ ಇಲ್ಲದಿದ್ದ ಆತ್ಮ ವಿಶ್ವಾಸ. ಉತ್ತರೋತ್ತರ ಉತ್ಸಾಹ. ಸ್ವಲ್ಪ ಹೊತ್ತಿನಲ್ಲಿಯೇ ನಿದ್ರೆಯು ಮಂಪರ ಕಣ್ಣುಗಳನ್ನು ಆವರಿಸಿತು. ನಿದ್ದೆ. ಹಗಲು ರಾತ್ರಿಯೆಲ್ಲಾ ಸುಖವಾದ ನಿದ್ದೆ.

ಮರುದಿನ ಬೆಳಿಗ್ಗೆ ಬೆಳ್ಳಗೆ ಬೆಳಕು ಮೂಡಿ ಎಚ್ಚರವಾದಾಗ ಕಣ್ತೆರೆದು ನೋಡಿದಳು ಡಾ|| ಮಣಿಮಾಲಾ. ನೋಡಿಯೇ ನೋಡಿದಳು. ಮದನ ಮಂಜರಿ ಪುಷ್ಪ ಬಾಡಿದ್ದರೂ ಕಂಪುಬೀರುತ್ತಿದೆ.

—o—

# ವಾಸವಿ

ದೈವಾಧೀನಂ ಜಗತ್ಸರ್ವಂ ಮಂತ್ರಾಧೀನಂತು ದೈವತಂ ।

ಇನ್ನೂ ಬೆಳಗಿನ ಒಂಭತ್ತರ ಸಮಯ.

ವಾಸವಿ ಮೇಜಿನ ಮುಂದೆ ಕುಳಿತು ಕೆಲವು ಪಂಕ್ತಿಗಳನ್ನು ಗೀಚಿದ್ದಳೇನೋ....ಭಾವನೆಗಳು ದಂಡೆದ್ದು ಬರುತ್ತಿವೆ. ಕಥೆಗೆ ರೂಪು ಕೊಡುತ್ತಿದ್ದಾಳೆ. ಹಲವಾರು ಪಾತ್ರಗಳು ಸೃಷ್ಟಿಯಾಗಿವೆ. ಬರವಣಿಗೆಗೆ ಹುರುಪು ಬರುತ್ತಿರುವಾಗ ಹೃನ್ಮನಗಳಲ್ಲಿ ಎಲ್ಲಿಲ್ಲದ ಉತ್ಸಾಹ.

ಟ್ರ್ರಣ್. ಟ್ರ್ರಣ್. ಟ್ರ್ರಣ್. ಟ್ರ್ರಣ್.

ತಲೆಬಾಗಿಲ ಕರೆಗಂಟೆ ಕರೆಕೊಟ್ಟಿತು.

ವಾಸವಿ ಏಳಲಾರಳು, ಬಿಡಲಾರಳು. ಏಳುವುದರೊಳಗಾಗಿ ಮತ್ತೆ ಅದೇ ಟಂಟಣಿ ನಾದ. ಕದ ತೆರೆದು ನೋಡಿದರೆ ರಾಜು ! ಹೇಗೆ ಶಾಲೆಗೆ ಹೋಗಿದ್ದನೋ ಹಾಗೆಯೇ ಹಿಂದಿರುಗಿದ್ದಾನೆ !

"ಏನಪ್ಪಾ, ಏಕೆ ಬಂದು ಬಿಟ್ಟೆ ? ಮೇಡಂ ಕೋಪಿಸಿಕೊಂಡರೇ ? ಅಥವಾ ನೀನೇ ಶಾಲೆಗೆ ಹೋಗದೆ ಹಿಂದಿರುಗಿ ಬಂದೆಯಾ ? ಮೈಯಲ್ಲಿ ಹುಷಾರಿಲ್ಲವೇ ?"

"ಪ್ರಶ್ನೆಗಳ ಮೇಲೆ ಪ್ರಶ್ನೆಗಳು. ಆಶ್ಚರ್ಯವಿಸ್ತೃತನಯನಗಳಲ್ಲಿ ಮಿಂಚು ಮಿನುಗಿತು. ಬಾಲಕ ತಲೆಯೆತ್ತಿ ನೋಡಿದ. ಸ್ವಲ್ಪಹೊತ್ತು ಮಾತು ಹೊರಡಲಿಲ್ಲ. ತಾಯಿಯ ಅಸಮಾಧಾನ ಮನವನ್ನು ಮುಟ್ಟಿತು.

"ಮೇಡಂ ಕೋಪಿಸಿಕೊಂಡರೇ ? ನೀನು ಹೋಂವರ್ಕ್ ಮಾಡಿರಲಿಲ್ಲವೇ ?"

"ಅಂತಹದೇನೂ ನಡೆಯಲಿಲ್ಲ. ನಾನು ಹೋಂವರ್ಕ್ ಮಾಡಿಕೊಂಡು ಹೋಗಿದ್ದೆ. ನಾನೇ ರಜ ಕೇಳಿಕೊಂಡು ಬಂದೆ." ಬಾಲಕ ತನ್ನನ್ನು ತಾನು ಸುಧಾರಿಸಿಕೊಳ್ಳುತ್ತ ನುಡಿದ.

"ಏಕೆ ಏತಕ್ಕಾಗಿ ?" ಆಶ್ಚರ್ಯದಿಂದ ತಾಯಿಯ ದನಿಯೇರಿತು.

"ಮುಂದಿನ ಭಾನುವಾರ ಶಾಲೆಯಲ್ಲಿ ಮಕ್ಕಳ ಕರಕುಶಲಕಲೆ ಮತ್ತು ಸಂಗೀತ ಪ್ರದರ್ಶನವಿದೆ. ಅದಕ್ಕೆ ನಾನಿಷ್ಟು ತಯಾರಿ ನಡೆಸಿಕೊಳ್ಳುವೆ. ಮೇಡಂಗೆ ಹೇಳಿಕೊಂಡೇ ಬಂದಿರುವೆ !"

"you silly !" ಚೀರಿದಳು. ತಾಯಿ. ಸಿಟ್ಟಿನಿಂದ ಮುಖ ಕೆಂಪು ತಳೆಯಿತು.

"ಏಕಮ್ಮಾ? ಸಂಗೀತ ಚೆನ್ನಾಗಿದ್ದರೆ ಪ್ರೈಜ್ ಬರುತ್ತೆ. ನಮ್ಮ ಶಾಲೆಗೆ ಪ್ರಸಿದ್ಧ ಕಲಾವಿದ ರತ್ನಾಕರ ರೈ ಬರುತ್ತಾರಮ್ಮಾ? ಅವರು ಮೆಚ್ಚಿದರೆ ವಿಶೇಷವಲ್ಲವೇ ?"

"ಇಲ್ಲಿ ಕೇಳು ಮಗೂ ! ಈ ಕೊಳಲಿನಿಂದ ಈ ದಿನಗಳಲ್ಲಿ ಜೀವನೋಪಾಯ ಸಾಧ್ಯವೇ ಇಲ್ಲ. ಏನಾದರೂ ನಿನ್ನ ಮನಸ್ಸಂತೃಪ್ತಿಗೆ ಕೆಲವು ಹಾಡು ಹಾಡಿಕೊಳ್ಳಬಹುದೇ ವಿನಾ ಓದು ಬಿಟ್ಟು ಅದನ್ನೇ ನೆಚ್ಚಿಕೊಂಡಿದ್ದರೆ ನಿನ್ನ ಗತಿ ಗಂಗಮ್ಮನ ಪಾಲು !"

"ನಮ್ಮಲ್ಲಿ ಎಂತೆಂತಹ ಮಹನೀಯರು ಸಂಗೀತ ಕಲೆಯಲ್ಲಿ ಚಿತ್ರ ಕಲೆಯಲ್ಲಿ ಪ್ರಸಿದ್ಧರಾಗಿದ್ದಾರೆ. ರವೀಂದ್ರನಾಥ ಠಾಕೂರರು ಕೂಡಾ ಚಿತ್ರಕಲೆಯಲ್ಲಿ ನಿಷ್ಣಾತರು. ನಿಮಗೆ ಗೊತ್ತಿಲ್ಲವೇ ?"

"ರಾಜೂ, ಅವರು ಚಿತ್ರಕಲೆಯನ್ನವಲಂಬಿಸಲಿಲ್ಲ ಜೀವನಕ್ಕೆ. ನಿನ್ನದು ಹಾಗಲ್ಲ.....ನೀನು ವಿದ್ಯೆ ಬುದ್ಧಿ ಕಲಿತನಂತರ ಜೀವನೋಪಾಯದೊಂದಿಗೆ ನಿನ್ನ ಕಲೆಯನ್ನು ಅವಲಂಬಿಸಬಹುದು. ಈಗ ಇಂಥ ಕಲಿಯುವ ವಯಸ್ಸಿನಲ್ಲಿ ಕ್ಲಾಸು ತಪ್ಪಿಸಿ ಕಲೆಯಗೀಳಿನಲ್ಲಿದ್ದರೆ ಓದಿನಲ್ಲಿನ ಆಸಕ್ತಿಯನ್ನು ಖಂಡಿತ ಕಳೆದುಕೊಳ್ಳುತ್ತಿ. ಇದು ಶುದ್ಧಾಂಗವಾಗಿ ತಪ್ಪು ! ನಡೆ, ನಿನ್ನನ್ನು ನಾನೇ ಶಾಲೆಗೆ ಬಿಟ್ಟು ಬರುವೆ. ನಿನಗೆ ಈ ವಿಚಾರದಲ್ಲಿ

ಹಿಂದೆಯೇ ಬಹಳವಾಗಿ ಹೇಳಿರುವೆ. ಆದರೂ, ನೀನು ತಲೆಗೇ ತೆಗೆದುಕೊಳ್ಳುತ್ತಿಲ್ಲ. ನಿನ್ನ ಈ ಕಲೆಯ ಹುಚ್ಚು ಹಾದಿ ತಪ್ಪಿಸುವುದು ಸತ್ಯ. ಕಲೆಯನ್ನು ಎಂದಾದರೂ ಅಭ್ಯಸಿಸಬಹುದು. ಠಾಕೂರರು ಚಿತ್ರಕಲೆ ಕಲಿತಿದ್ದು ಎಪ್ಪತ್ತೈದರ ಇಳಿವಯಸ್ಸಿನಲ್ಲಿ. ನೀನೂ ಹಾಗೆಯೇ ನಿವೃತ್ತಿ ಜೀವನದಲ್ಲಿ ಬೇಕಾದಷ್ಟು ಕಲಾರಾಧನೆಮಾಡು ಯಾರು ಬೇಡವೆನ್ನುತ್ತಾರೆ.....? ಈಗ ಮಾತ್ರ ಓದು ವಿದ್ಯೆಯಲ್ಲದೆ ಬೇರೊಂದು ಬೇಡವೇ ಬೇಡ. ನೀನು ಓದಿಗಾಗಿ ನೀಡುವ ಗಮನ ಏನೇನೂ ಸಾಲದು."

"ಅಮ್ಮಾ....." ಗೋಗರೆದ ರಾಜಾನಂದ್. ಕಣ್ಣುಗಳಲ್ಲಿ ಆಸೆಯ ಬೆಳಕು ಮಿಂಚಿತು.

"No ...no !" ಅಷ್ಟೇ ರೇಜಿನಿಂದ ನುಡಿದಳು ವಾಸವಿ.

"ಈ ಸಲಿ ಸುಮ್ಮನಿರಮ್ಮಾ. ನಾನು ರತ್ನಾಕರ ರೈಯವರನ್ನು ನೋಡಲೇಬೇಕು !"

"ಹುಚ್ಚು ಮಗು ! !" ಭರ್ತ್ಸನೆ ಮಾಡಿದಳು ತಾಯಿ.

ತಾಯಿಯ ಕೋಪೋದ್ದೀಪ್ತ ಮುಖವನ್ನೇ ನೋಡುತ್ತ ಒಳಗಡೆ ಪದಾರ್ಪಣೆ ಮಾಡಿದ ರಾಜಾನಂದ. ತಲೆಯಲ್ಲಿ ವಿಚಾರ ಸಂಪತ್ತಿ ಸುಳಿ ಸುತ್ತುತಿತ್ತು. ಅಮ್ಮ ಕಲಿಯಲು ಅವಕಾಶ ಕೊಡದಿದ್ದರೆ ಎಲ್ಲಾದರೂ ಮರದ ಕೆಳಗೆ ಕಲಿಯಬಾರದೇಕೆ ಎಂದುಕೊಂಡ ಮನದಲ್ಲಿ.

ರಾಜಾನಂದ್ ಅಂದಿಂದಿಗೂ ಕೊಳಲಿನಲ್ಲಿ ಮನಸ್ಸಿಟ್ಟವ. ಅಪ್ಪ ಇಲ್ಲದ ಸಮಯದಲ್ಲಿ ಹೊತ್ತು ಕಳೆಯುತಿದ್ದುದು ಸಂಗೀತದಲ್ಲಿ-ಚಿತ್ರಕಲೆಯಲ್ಲಿ. ಆಟಪಾಠದಲ್ಲಿ ನಿರಾಸಕ್ತಿ. ತಂದೆಯೂ ಆ ಬಗ್ಗೆ ಅನೇಕ ಬಾರಿ ಆಕ್ಷೇಪಿಸುತಿದ್ದ. ಆದರೆ ಮಗನ ಅಭೀಷ್ಟವೇ ಬೇರೆ. ಧ್ಯೇಯೋದ್ದೇಶಗಳೇ ಬೇರೆ. ಕೊಠಡಿಯಲ್ಲಿ ನೆಲದಮೇಲೆ ಕುಳಿತೇ ಕೊಳಲು ನುಡಿಸುತ್ತ ಅಥವಾ ಚಿತ್ರಿಸುತ್ತ ತನ್ನದೇ ಆದ ಜಗತ್ತಿನಲ್ಲಿ ತಾನೇ ತಾನಾಗಿ ವಿಹರಿಸುವ.

* * * *

ವಾಸವಿ ಯಾವುದೋ ಲೇಖನ ಬರೆಯುವುದರಲ್ಲಿ ನಿಮಗ್ನಳಾದಳು. ಸ್ವಲ್ಪಹೊತ್ತು ನಿರಾತಂಕವಾಗಿ ಸಾಗಿತು ಸಾಹಿತ್ಯಕಲೆ. ಮನಸ್ಸು ಆದರಲ್ಲಿ

ಸಂಪೂರ್ಣ ಮುಳುಗಿದಾಗಲೇ ತಲೆಬಾಗಿಲ ಕರೆಗಂಟೆ ಕರೆ ನೀಡಿತು. ಅದು ಎಷ್ಟು ಕರ್ಕಶವಾಗಿ ಕೇಳಿತೆಂದರೆ ಕರೆಗಂಟೆಯನ್ನು ಕಿತ್ತೆಸೆಯಲೇ ಎಂಬಷ್ಟು ಬೇಸರ.

ಟ್ರಣ್. ಟ್ರಣ್. ಟ್ರಣ್. ಟ್ರಣ್.

ವಾಸವಿ ಏಳಲಾರದೇ ಎದ್ದಳು. ಮೈಯೆಲ್ಲಾ ಅಸಮಾಧಾನದ ಪ್ರತೀಕವಾಗಿ. ಒಂದು ಪುಟವನ್ನು ಮುಗಿಸಲಾಗಲಿಲ್ಲವಲ್ಲಾ ಎಂದು ನರ ನರಗಳೂ ನರಳಿದುವು. ಹೀಗಾದರೆ ಏನನ್ನೂ ಸಾಧಿಸಲಾರೆ ಎಂದು ಹೃದಯ ಪಕ್ಷಿಯ ಕೊರಗು. ಮನಸ್ಸು ಮುದುಡಿತು. ಎದ್ದು ಹೋಗಿ ಕದ ತೆರೆದಳು.

"ಅಹಾ ! ನಿನ್ನ ನೋಡಿ ಎಷ್ಟು ವರ್ಷವಾಗಿತ್ತು ರಮಣಿ !"

ಬಾಲ್ಯ ಗೆಳತಿಯನ್ನು ನೋಡುತ್ತಲೂ ಅಸಮಾಧಾನ ದರಗೆಲೆಯಂತೆ ಉದುರಿ ಹೋಯಿತು. ಅವಳನ್ನು ಬಿಗಿದಪ್ಪಿ ಆತ್ಮೀಯ ಆಲಿಂಗನ ನೀಡಿದಳು. ಮುಖಬಿಂಬ ಅರಳಿ ಹೂವಾಯಿತು. ಇಬ್ಬರೂ ಒಳಬಂದು ಸೋಫದ ಮೇಲೆ ಮೈಚೆಲ್ಲಿದರು, ಮೈಗೆ ಮೈ ಹಚ್ಚಿ.

"ನಿನ್ನ ಕವನವನ್ನು ಪತ್ರಿಕೆಯಲ್ಲಿ ಓದಿದೆ. ಚೆನ್ನಾಗಿ ಬಂದಿದೆ. ನೀನು ಸಂಸಾರಕ್ಕೆ ಕಾಲಿರಿಸಿದ ಮೇಲೂ ನಿನ್ನ ಸಾಹಿತ್ಯಾಭಿರುಚಿ ಉಳಿಸಿಕೊಂಡಿರುವುದೇ ವಿಶೇಷ !"

ಆ ಮಾತಿಗೆ ಮನದಲ್ಲಿ ಒಮ್ಮೆಗೇ ಕಾವ್ಯ ಸಂಗೀತದ ಅಲೆಗಳ ವರ್ತುಲಗಳು ಸುಳಿಸುತ್ತಿದುವು ನೊರೆಗುಳ್ಳೆಗಳಂತೆ. ಆನಂದೋತ್ಸಾಹದ ಝರಿ ನರನಾಡಿಗಳಲ್ಲಿ ಝುರ್ರನೆ ಹರಿದಾಡಿತು. ಅವಳನ್ನು ಬಳಸಿ ಹಿಡಿದು "ಅದನ್ನು ಉಳಿಸಿಕೊಳ್ಳಬೇಕೆಂದರೆ ಎಷ್ಟು ಕಷ್ಟಪಡಬೇಕು ಎಂಬುದನ್ನು ಆ ಪರಮಾತ್ಮ ಬಲ್ಲ. ಶ್ರೀಧರ್‌-ಗೆ ಸಾಹಿತ್ಯ ಗಂಧವಿಲ್ಲ. ದಿನವೂ ನೆಂಟರಿಷ್ಟರು, ಗೆಳೆಯರು, ಆ ಪಾರ್ಟಿ, ಈ ಪಾರ್ಟಿ. ಅವರಿಗೆ ಇದೆಲ್ಲಾ ಬೇಕಿಲ್ಲ. ದಿವಸಕ್ಕೆ ಒಂದು ಗಂಟೆ ಸಮಯ ಹೊಂದಿಸಿಕೊಳ್ಳುವುದೇ ಕಷ್ಟ. ಇಂದಮೇಲೆ ಎಲ್ಲಿಯ ಸಾಹಿತ್ಯ ಸೇವೆ ಹೇಳು." ಕಳಕಳಿಯಿಂದ ಹೊರಬಿತ್ತು ಧ್ವನಿ.

"ಸಂಸಾರ ಎಂದಮೇಲೆ ಹಾಗೆಯೇ. ಸಮಯ ಉಳಿತಾಯ ಕಷ್ಟವೇ. ಆದರೂ ಪ್ರಯತ್ನಪೂರ್ವಕವಾಗಿ ಉಳಿಸಿಕೊಳ್ಳುವುದೇ ಬುದ್ಧಿವಂತಿಕೆ. ಅಂದರೆ....." ಅಷ್ಟಕ್ಕೇ ಮಾತು ತುಂಡುಗಡಿಯಿತು.

"ಏನು ಹೇಳು ರಮಣೀ ?"

"ಈ ಕಾಲದಲ್ಲಿ ಸಂಸಾರ ಜೀವನ ಹಿಂದಿನಷ್ಟು ಕಷ್ಟಕರವಾಗಿಲ್ಲ. ಆಧುನಿಕ ಶೈಲಿಯಿಂದ ಎಲ್ಲ ವ್ಯವಹಾರವೂ ಕ್ಷಿಪ್ರವಾಗಿ ನಡೆಯುವುದರಿಂದ ಸಾಕಷ್ಟು ಸಮಯದ ಉಳಿತಾಯ ಆಗುತ್ತದೆ. ಮುಖ್ಯವಾಗಿ ಎಲ್ಲವೂ ನಿನ್ನ ಕೈಯ್ಯಲ್ಲಿದೆ."

" Oh, my God ! ಯಾವುದೂ ನನ್ನ ಕೈಲಿಲ್ಲ. ಪ್ರಯತ್ನ ನನ್ನ ದಾದರೂ ಫಲ ನನ್ನ ಕೈಲಿಲ್ಲ ಬಿಡು. !"

ಮೇಜಿನ ಮೇಲಿನ ಟೆಲಿಫೋನ್ ಕರೆ ನೀಡಿತು.

ಟ್ರಣ್. ಟ್ರಣ್. ಟ್ರಣ್. ಟ್ರಣ್.

ವಾಸವಿ ಎದ್ದು ಹೋಗಿ ಮೌತ್‌ಪೀಸ್ ತೆಗೆದುಕೂಂಡು ಉತ್ತರಿಸಿದಳು,

"ಹಲೋ !"

ಅತ್ತಕಡೆಯಿಂದ ಶ್ರೀಧರನ ಧ್ವನಿ.

"ಹಲ್ಲೋ ವಾಸವೀ !"

" Yes ?"

"ಇಂದು ರಾತ್ರಿಗೆ ನನ್ನ ಗೆಳೆಯ ನವೀನ್ ದಂಪತಿಗಳು ಮತ್ತು ಮಕ್ಕಳು ಐದು ಮಂದಿಯೂ ಬರುತ್ತಾರೆ ಖಾರಾಪುರದಿಂದ. ಅವರೊಂದಿಗೆ ರಾತ್ರಿ ಎಂಟು ಗಂಟೆಯ ಒಳಗೇ ಮನೆಗೆ ಬರುವೆ. ಊಟ ಸಿಂಪಲ್ಲಾದರೂ ರುಚಿಯಾಗಿರಲಿ. ನಿನ್ನ ಸಹಾಯಕ್ಕೆ ರಾಮು ಕಳುಹಿಸಲೇ ? ಏನಾದರೂ ಬೇಕಿದ್ದರೆ ತಂದುಕೊಡುತ್ತಾನೆ."

"ಎಲ್ಲಾ ಸಾಮಗ್ರಿಯೂ ಇದೆ. ತರುವುದೇನೂ ಇಲ್ಲ. !"

ವಾಸವಿ ಅಸಮಾಧಾನದಿಂದ ಫೋನಿನ ಸಂಪರ್ಕ ತುಂಡುಗಡಿದು ಬಂದು ಸೋಫದ ಮೇಲೆ ಕುಳಿತಳು. ಒಂದೆರಡುಗಳಿಗೆ ಬಾಯಿಂದ ಮಾತೇ ಹೊರಡಲಿಲ್ಲ.

"ಏನಮ್ಮಾ ಸಮಾಚಾರ ?"

"ರಾತ್ರಿಗೆ ಶ್ರೀಧರ ಫ್ರೆಂಡ್ಸ್ ಜೊತೆ ಬರುತ್ತಾರಂತೆ. ಡಿನ್ನರ್ ತಯಾರಿಸಬೇಕು."

"ಸರಿ, ನಿನಗಿನ್ನು ಕೈತುಬಾ ಕೆಲಸವಿದೆ."

"ಪತಿ ಮಹಾಶಯ ಯಾವತ್ತೂ ಹೀಗೆಯೇ. ಯಾರಾದರೂ ಮನೆಗೆ ಬರುತ್ತಿರಬೇಕು. ತಾವೂ ಎಲ್ಲಾದರೂ ಹೋಗುತ್ತಿರಬೇಕು. ವೃಥಾ ಸಮಯ ಹಾಳು. ಮಕ್ಕಳೂ ಅಷ್ಟೆ. ರಾಜುಗೆ ಚಿತ್ರಕಲೆ-ಸಂಗೀತಗಳ ಹುಚ್ಚು. ಪುಸ್ತಕ ಮುಟ್ಟದೆ ಕೊಳಲು ನುಡಿಸುತ್ತಾನೆ. ರಾಮುಗೆ ಇಂಜನಿಯರಿಂಗ್‌ನಲ್ಲಿ ಹುಚ್ಚು. ನಾನಾ ಪರಿಕರಣಗಳನ್ನು ಇಟ್ಟುಕೊಂಡು ಬಿಚ್ಚುವುದು ; ಜೋಡಿಸುವುದು ; ಅದರಲ್ಲೇ ನಿಮಗ್ನ. ಮುಂದೆ ಇಂಜನಿಯರಿಂಗ್ ಓದುವುದು ಹೇಗೂ ಇದ್ದೇ ಇದೆ. ಈಗ ಚೆನ್ನಾಗಿ ಓದು ಎಂದರೆ ಕೇಳುವುದೇ ಇಲ್ಲ. ಇಬ್ಬರಿಗೂ ಓದಿಸಬೇಕಾದರೆ ಸಾಕು ಸಾಕಾಗುತ್ತೆ. ನನ್ನ ಸಮಯವೆಲ್ಲಾ ಹೀಗೆಯೇ ಕಳೆದು ಹೋಗುತ್ತೆ. ಇನ್ನೆಲ್ಲಿ ಸಾಹಿತ್ಯ ಹೇಳು ? ಸತ್ ಸಾಹಿತ್ಯ ಸಂಪಾದನೆಗೆ ಮನಶ್ಶಾಂತಿ ಬೇಕು. ತಲೆಭಾರವಿಲ್ಲದೆ ನಿರಾಳವಾಗಿ ಉಸಿರಾಡುವಂತಿದ್ದರೆ ಏನಾದರೂ ಬರೆಯಬಹುದು. ಇಲ್ಲದಿದ್ದರೆ ಸಾಧ್ಯವೇ ಇಲ್ಲ." ತಲೆಯಾಡಿಸುತ್ತ ನಿರಾಸೆ ವ್ಯಕ್ತ ಪಡಿಸಿದಳು ವಾಸವಿ.

"ಇದೆಲ್ಲಾ ತಾತ್ಕಾಲಿಕ. ನೀನು ಮುಂದೆ ತುಂಬಾ ದೂರ ನಡೆಯಬೇಕು..... ಬಹಳಕಾಲವಿದೆ. ಖಂಡಿತ ಯೋಚಿಸಬೇಡ. ಮನಸ್ಸಿದ್ದಲ್ಲಿ ಮಾರ್ಗ. ಹುಟ್ಟಿಸಿದವ ಹುಲ್ಲು ಮೇಯಿಸುತ್ತಾನೆ. ವ್ಯತ್ಯೋರ್ವಾ ಅಮ್ಮಂತಂಗಮಯ."

"ನಮ್ಮ ವಿಧಾನಕ್ಕೆ ಅದನ್ನು ತಿರುಗ ಮರುಗ ಮಾಡಿದರೆ ಸರಿ ಹೋಗುತ್ತೆ."

ಇಬ್ಬರ ತುಟಿಯಲ್ಲೂ ಅನುಭಾವದ ನಗೆ ಅರಳಿತು.

* * * *

ರಾಮು ಮೇಜಿನ ತುಂಬೆಲ್ಲಾ ಯಾವುಯಾವುದೋ ಇಂಜನಿಯರಿಂಗ್ ಸೆಟ್ ಹರಡಿಕೊಂಡು ಕುಳಿತಿದ್ದ. ಬಟ್ಟೆ, ಷೂ, ಪುಸ್ತಕ, ಬರೆಯುವ

ಸಾಧನಗಳು, ಪರಿಕರಗಳನ್ನು ಜೋಡಿಸುವ ಸಾಧನಗಳು ಎಲ್ಲವೂ ಅಲ್ಲಲ್ಲಿ ಹರಡಿ ಬಿದ್ದಿದ್ದು ಕೊಳಕು ಮಯವಾಗಿತ್ತು ಕೊಠಡಿ.

"ಇದೇನಪ್ಪಾ ರಾಮು ವಿದ್ಯಾರ್ಥಿಗಳು ಹೀಗಿದ್ದರೆ ಹೇಗೆ ?"

"........."

"ರಾಮು !" ಸಿಟ್ಟಿನಿಂದ ಚೀರಿದಳು ವಾಸವಿ.

"ಏನಮ್ಮಾ ?"

"ನೀನು ಸದಾ ಇದರಲ್ಲೇ ಮುಳುಗುವುದಾದರೆ ಓದಿನ ಗತಿಯೇನು ? ಸ್ವಲ್ಪವೂ ಅತ್ತ ಗಮನವಿಲ್ಲ. ನೀನು ಬಹಳ ಕೇರ್‌ಲೆಸ್ !"

"ಅಮ್ಮಾ! ಇದಿಷ್ಟು ಸರಿಮಾಡಿಕೊಂಡನಂತರ ಓದುವೆ."

"ಯೂ ಫೂಲ್ ! ದಿನ ನಿತ್ಯದ ಹೋಂವರ್ಕ್ ಆದನಂತರ ಇತರೆ ಹವ್ಯಾಸ. ರಾಜು ನೋಡಿದರೆ ಕೊಳಲು ಹಿಡಿದುಕೊಂಡು ಕೂತಿರುತ್ತಾನೆ. ನೀನು ನೋಡಿದರೆ ಹೀಗೆ....! ನನಗೆ ಸಾಕಾಗಿದೆ! ಏಳು. ನಿನ್ನ ಸಾಮಾನೆಲ್ಲಾ ಆಚೆ ಎಸೆದು ಬಿಡುವೆ, ನನ್ನ ಮಾತು ಕೇಳದಿದ್ದರೆ !" ಕೋಪದಿಂದ ಧ್ವನಿ ಅದುರಿತು. ಕೆಂಪು ಕೆಂಪು ಕಳೆದಳು ವಾಸವಿ.

ರಾಮು ಸಿಟ್ಟಿನಿಂದ ಚೀರಿದ "ನನಗೆ ಪಾಸು ಮಾಡವುದು ತಿಳಿಯದೆ? ನಾನು ಪಾಸಾದರೆ ಸಾಕಲ್ಲ ? ನಾನು ಏನಾದರೂ ಮಾಡಿಕೊಳ್ಳುವೆ. ನನ್ನ ಪಾಡಿಗೆ ನನ್ನಬಿಟ್ಟು ಬಿಡಿ !"

"ನನ್ನ ಮಾತು ಕೇಳುತ್ತೀಯೋ ಇಲ್ಲವೋ !"

"ಅಮ್ಮಾ....ಸ್ವಲ್ಪಹೊತ್ತು."

ತಲೆಬಾಗಿಲ ಕರೆಗಂಟೆ ಕರೆ ನೀಡಿತು.

"ಟ್ರೀಣ್. ಟ್ರೀಣ್. ಟ್ರೀಣ್. ಟ್ರೀಣ್.

ವಾಸವಿ ಕದ ತೆರೆದಳು. ಒಳ ಬಂದವನು ಶ್ರೀಧರ. ಮಡದಿಯ ಮುಖಭಾವವನ್ನು ಕಂಡು ಕೇಳಿದ "ಏನು ಸಮಾಚಾರ ?"

"ರಾಮು ನಟ್ಟು ಬೋಲ್ಟು ಹಿಡಿದುಕೊಂಡು ಕೂತಿದ್ದಾನೆ. ಎಷ್ಟು ಹೇಳಿದರೂ ಓದುತ್ತಿಲ್ಲ. ಪರೀಕ್ಷೆ ಹತ್ತಿರಬಂತು. ದಿನಾ ಹೀಗಾದರೆ ಏನು ಗತಿ ?" ಹೌಹಾರಿದಳು ವಾಸವಿ.

"ಇರಲಿ, ನೀನು ಅಸಮಾಧಾನಗೊಳ್ಳಬೇಡ. ನಾನವನಿಗೆ ಹೇಳುವೆ."

* * * *

ಹಗಲು ಉರುಳಿತು. ಸಂಜೆ ಅಡರುತ್ತಿದೆ.

ವಾತಾವರಣದಲ್ಲಿ ಸಾಯಂ ಶೀತಲತೆಯ ತಂಪು-ಪೆಂಪು.

ಶ್ರೀಧರ ಒಳ ಬರುತ್ತಲೇ ಅಂದ "ಅಣ್ಣ ಅತ್ತಿಗೆ ಮಕ್ಕಳು ಮದರಾಸಿನಲ್ಲಿ ಸೀದುಹೋಗುತಿದ್ದಾರೆ. ತಾಳಲಾರದ ಸೆಕೆ ಅಂತೆ. ಮೇಲಾಗಿ, ನೀರೂ ಇಲ್ಲವಂತೆ. ಪಾಪ, ಬಹಳ ಕಷ್ಟ. ಬೇಸಗೆ ರಜೆಯನ್ನು ಇಲ್ಲೇ ಕಳೆಯಿರಿ ಎಂದಿರುವೆ. ಮುಂದಿನವಾರ ಅವರೆಲ್ಲಾ ಬರುತ್ತಾರೆ. ಅಷ್ಟರೊಳಗೆ ಇವರಿಗೂ ಪರೀಕ್ಷೆ ಮುಗಿದಿರುತ್ತದೆ. ಅನಂತರ ಎಲ್ಲರೂ ಊಟಿಯ ಕಡೆ ಹೋಗೋಣ."

ವಾಸವಿ ಆ ತುಂಬಿದ ಸಂಸಾರವನ್ನು ನೆನಪಿಸಿಕೊಂಡಳು. ಅವರೆಲ್ಲಾ ಬರುವುದು ಬೇಡವೆಂದೇನಲ್ಲ. ಆ ಮಕ್ಕಳು-ಅಕ್ಕ ಎಲ್ಲರೂ ಸ್ನೇಹಪರರೇ. ಆದರೆ, ತನ್ನ ಸಾಹಿತ್ಯ ಕಲೆಯ ಬಗ್ಗೆ ಅವರಾರಿಗೂ ಗಮನ-ಚಿಂತೆ ಮತ್ತೊಂದು ಮಗದೊಂದು ಇಲ್ಲ. ಅಡಿಗೆ-ಊಟ ಇಷ್ಟರಲ್ಲೇ ಕಳೆದು ಹೋಗುತ್ತೆ ಹೊತ್ತು. ಒಂದು ಗಂಟೆಯಾದರೂ ಸದ್ದಿಲ್ಲದೆ ಲೇಖನಿ ಹಿಡಿಯುವಂತಿಲ್ಲ. ಮನಸ್ಸು ಮೌನವಾಗಿ ರೋಧಿಸಿತು. ತನ್ನ ಕೆಲವೇ ಕೆಲವು ಸಾಹಿತ್ಯಿಕ ಕೃತಿಗಳನ್ನು ಎಲ್ಲರೂ ಮೆಚ್ಚಿಕೊಂಡಿದ್ದಾರೆ. ಶ್ರೀಧರನಿಗೆ ಸಾಹಿತ್ಯ, ಸಂಗೀತ ಮುಂತಾದ ಯಾವ ಕಲೆಯಲ್ಲಿಯೂ ಆಸಕ್ತಿ ಇಲ್ಲ. ಆಸಕ್ತರನ್ನು ಕಲಾರಾಧನೆಗೈಯಲು ಬಿಡುವುದೂ ಇಲ್ಲ. ಆ ಕಾಗೆ ಕತೆ, ಗುಬ್ಬಿಕತೆ ಬರೆದರೆಷ್ಟು, ಬಿಟ್ಟರೆಷ್ಟು ? ಎಂದು ನುಡಿದು ಹುರುಪಿಗೆ ಎಳ್ಳು ನೀರು ಬಿಡುವುದು ಇದ್ದದ್ದೇ. ಮೊದಮೊದಲು ಆ ತಿರಸ್ಕಾರ ಎದೆಯನ್ನು ಶೂಲದಂತೆ ಇರಿಯುತಿತ್ತು. ಲೇಖನಿಯನ್ನು ಮುಟ್ಟುವುದೇ ಬೇಡ ಎಂಬಷ್ಟು ನೋವು-ಜಿಗುಪ್ಸೆ-ತಿರಸ್ಕಾರ-ದುಃಖ ಇನ್ನೂ ಏನೇನೂ ತಲೆಯನ್ನು ಮುತ್ತಿ ಘಾಸಿಗೊಳಿಸುತಿದ್ದುವು. ತಲೆ ಭಾರಾತಿಭಾರ. ಭಾವನೆಗಳೇ ಮಂಕು. ಬಿಡುವಿನ ವೇಳೆಯನ್ನು ಕಳೆಯುವ ಸಂಕಟ ಕಂಬನಿ ಕರೆಸುತಿತ್ತು. ಆಸೆ-ಆಕಾಂಕ್ಷೆಗಳು ಮೌನವಾಗಿ ಹುಯ್ಯಲಿಡುತಿದ್ದುವು. ವಾಸವಿ ಪುಸ್ತಕ ಪಠಣ ಕೈಕೊಳ್ಳುವಳು. ಆದರೆ, ನಿರುತ್ಸಾಹಿತ ಮನಸ್ಸು

ವಿಷಯ ಗ್ರಹಣ ಮಾಡಿದರಷ್ಟೆ? ಮತ್ತೆ ನಾನು ಓದಿದ್ದೇನು? ಎಂದು ಪುಟಗಳನ್ನು ತಿರುವಿ ಹಾಕುವಂತಹ ಪ್ರಸಂಗ. ಅವಳು ಕಿಟಕಿಯಲ್ಲಿ ಮೊಗವಿಟ್ಟು ದೂರದಿಗಂತವನ್ನು ನಿಟ್ಟಿಸಿದಳು. ನೀಲ ವರ್ಣದ ಬೆಟ್ಟದ ಮುನ್ಮೈ ಮೇಲ್ಭಾಗದ ಗಿಡಗೆಂಟೆಗಳೆಲ್ಲಾ ಸುನೀಲವಾಗಿಯೇ ಕಾಣಿಸುತಿದ್ದ ಆ ಸುಮನೋಹರ ದೃಶ್ಯದಿಂದ ಮನಸ್ಸು ಅರಳಿತು. ಆ ಪರ್ಣಾರ್ಣವವನ್ನು ಕಣ್ ಎವೆಯಿಕ್ಕದೆ ನೋಡಿದಳು ಸ್ವಲ್ಪಹೊತ್ತು. ಮಾನಸಿಕ ಶಾಂತಿ ಇರದೆ ಯಾವೊಂದರಲ್ಲೂ ಆಸಕ್ತಿಯಿಲ್ಲ. ಹಿಂದಿನ ದಿನಗಳಲ್ಲಾಗಿದ್ದಿದ್ದರೆ ಕಂಡದ್ದನ್ನೆಲ್ಲಾ ಲೇಖನಿಯಲ್ಲಿ ಸರೆ ಹಿಡಿಯುವ ಹುರುಪು. ಈಗ ಅದೆಲ್ಲಾ ಎಲ್ಲಿ ಹೋಯಿತೋ. ಮುಂದಾದರೂ ಸರಿಹೋದೀತೆಂಬ ನೆಚ್ಚು ಉಳಿಯ ಲಿಲ್ಲ. ಕಣ್ಣುಗಳಿಂದ ಕಂಬನಿಗಳು ಮುತ್ತಿನ ಹನಿಗಳಂತೆ ಉದುರಿದುವು. ಎದೆಯ ಹಕ್ಕಿ ಸದ್ದಿಲ್ಲದೆ ಉಸಿರಾಡಿತು. ಮೈಮನಗಳು ಸೋತು ಹೋದಷ್ಟು ನಿರಾಸಕ್ತಿ. ಜೀವನ ನಿಸ್ಸಾರ ಎನಿಸುವಷ್ಟು ಜಿಗುಪ್ಸೆ.

* * * *

ಸಾಯಂ ಸಮಯ. ನಡು ಬಿಸಿಲ ಕಾವು ಇಳಿದಿದ್ದರೂ ಸೆಕೆ ಇದ್ದೇ ಇತ್ತು.

ಹೊರಗಡೆ ತಂಗಾಳಿಗೆ ಮೈಗೊಟ್ಟು ಅಂಗಳದಲ್ಲಿ ಅಡ್ಡಾಡುತ್ತಿರುವಾಗಲೇ ಕಾರು ಸರ್ರನೆ ಬಂದು ಪೋರ್ಟಿಕೋದಲ್ಲಿ ಬಂದು ನಿಂತಿತು. ಶ್ರೀಧರನ ಅಣ್ಣ ಮಡದಿ ಜಾನಕಿಯೊಡನೆ ಮೊದಲು ಇಳಿದ. ಅನಂತರ ಮೂರು ಮಂದಿ ಹೆಣ್ಣು ಮಕ್ಕಳು ಆಯಾಸದ ಗಣಿಗಳಾಗಿ ಇಳಿಯುವುದನ್ನು ಕಂಡ ವಾಸವಿ ಮುಂದಾಗಿ ಮಕ್ಕಳನ್ನು ಮುದ್ದಿಟ್ಟುಕೊಂಡಳು. ಎಲ್ಲರ ಮುಖದಲ್ಲೂ ಪರಸ್ಪರ ಸಂದರ್ಶನದ ಲಾಭದಿಂದ ಆನಂದದ ಮುಗುಳು ಅರಳಿತು.

ಜಾನಕಿ ಸಾಮಾನು–ಕೈ ಚೀಲಗಳನ್ನು ತೆಗೆದುಕೊಂಡು ಒಳಬಂದಳು. ಎಲ್ಲರ ಮುಖ ಮಜ್ಜನವಾದನಂತರ ತಣ್ಣನೆಯ ಪಾನೀಯ ವಿನಿಯೋಗ ಮಾಡಿದಳು ವಾಸವಿ.

"ಆಂಟೀ! ರಾಮು, ರಾಜು ಎಲ್ಲಿ ಕಾಣಿಸುತ್ತಿಲ್ಲವಲ್ಲಾ?"

"ಇಬ್ಬರೂ ಆಟದ ಬಯಲಿಗೆ ಹೋಗಿದ್ದಾರೆ. ಇನ್ನೇನು ಈಗ ಬಂದಾರು."

ಹೆಣ್ಣು ಮಕ್ಕಳಿಲ್ಲದ ತನಗೆ ಆ ಮಕ್ಕಳನ್ನು ಕಂಡರೆ ಎಲ್ಲಿಲ್ಲದ ಪ್ರೀತಿ. ಮೂವರನ್ನೂ ಅಕ್ಕಪಕ್ಕದಲ್ಲಿ ಕುಳಿರಿಸಿಕೊಂಡು ಮುದ್ದುಗೈಯುತ್ತ ವಾಸವಿ ಯೆಂದಳು,

"ನನಗೆ ರಾಮು-ರಾಜು ಹೆಣ್ಣು ಮಕ್ಕಳಾಗಿದ್ದಿದ್ದರೆ ಎಷ್ಟೋ ಚೆನ್ನಾಗಿತ್ತು. ಗಂಡುಮಕ್ಕಳು ಮಾತು ಕೇಳುವುದಿಲ್ಲ. ಅವರದ್ದೇ ಅವ ರಿಗೆ. ದಿನವೂ ಕೂರಿಸಿ ಓದಿಸಬೇಕಾದರೆ ಸಾಕು ಸಾಕಾಗುತ್ತೆ," ಜಿಗುಪ್ಸೆ ಯಿಂದ ನುಡಿದ ದನಿ ಎದೆಯಾಳದಿಂದ ಹೊರಬಿತ್ತು.

ಅದಕ್ಕೆ ಜಾನಕಿ ಅಂದಳು "ನೀನೇಕೆ ಈ ಹೆಣ್ಣು ಮಕ್ಕಳನ್ನು ಬಯು ಸುತ್ತೀ ಹೇಳು ? ಈಗ ಚಿಕ್ಕವರು ನಮ್ಮರೆಕ್ಕೆಯಡಿ ಇದ್ದಾರೆ-ಇರುತ್ತಾರೆ. ಬೆಳೆದಮೇಲೆ ಬಿಳಿ ಹುಡುಗ ಸಿಕ್ಕಿದರೆ ಸಾಕು. ಹಕ್ಕಿಗಳಂತೆ ಹಾರಿ ಹೋಗುತ್ತಾರೆ ! ಅನಂತರ ನಮಗೆ ನಾವೇ."

ಮೂವರು ಹುಡುಗಿಯರೂ ತಾಯಿಯ ಮಾತನ್ನು ನಿರಾಕರಿಸುತ್ತ "ಬಿಡಿ. ಬಿಡಿ! ನಾವು ಮದುವೆ ಆಗುವುದೇ ಇಲ್ಲ!" ಎಂದರು ಜೋರಿನಿಂದ.

ಆ ತಮಾಷೆಯಿಂದ ಮನೆಯಲ್ಲಾ ಕಲಕಲವಾಯ.

ಮದರಾಸಿನಿಂದ ಬೆಂಗಳೂರಿಗೆ ಬಂದ ಮಕ್ಕಳಿಗೆ ವೈಮನಗಳು ತಣ್ಣನೆಯ ತನಿಯುಂಡಷ್ಟು ತಣ್ಣಗೆ. ಇಲ್ಲಿಯವರೆಲ್ಲಾ ಧಗೆ-ದಾಹ-ಸೆಕೆ ಎಂದು ಪರದಾಡುತಿದ್ದರೆ ಅವರಿಗೆ ಮೂಗಿನ ಮೇಲೆ ಬೆರಳಿಡುವಷ್ಟು ಆಶ್ಚರ್ಯ! ಇದೊಂದು ಧಗೆಯೆ ಎಂದು.

ರಾಜು-ರಾಮು ಇಬ್ಬರೂ ಒಂದೇ ಉಸಿರಿಗೆ ದಡದಡ ಓಡಿ ಬಂದರು. ಒಳ ಬಂದೊಡನೆಯೇ ಅಕ್ಕಂದಿರು ಮೂವರು ಸುತ್ತುವರಿದು ಹೇಳಿದರು "ಆಂಟಿ ಮಾತನ್ನು ನೀವಿಬ್ಬರೂ ಕೇಳುವುದಿಲ್ಲವಂತೆ! ನೀವಿಬ್ಬರೂ ಹೆಣ್ಣು ಮಕ್ಕಳಾಗಿದ್ದಿದ್ದರೆ ಒಳ್ಳೆಯದಿತ್ತು ಎನ್ನುತ್ತಾರೆ! ನೀವು ಏನು ಹೇಳು ತ್ತೀರಿ ?"

ಥೂ.....ಥೂ.....! ಹುಡುಗಿತನ ಜೇಡವೇ ಬೇಡ !"

ಇಬ್ಬರೂ ಒಕ್ಕೊರಲಿನಿಂದ ನುಡಿದರು.

ಪುನಃ ನಗುವಿನ ಲಹರಿಯಿಂದ ತುಂಬಿ ಮನೆಯೆಲ್ಲಾ ಕಲಕಲಮಯ

* * * *

ಉದಕಮಂಡಲದ ಪ್ರಕಾಶ್ ಹೋಟಲ್.

ಮೇಲಿನ ಮಹಡಿಯಿಂದ ಪಕ್ಷಿನೋಟ ಬೀರಿದರೆ ಸ್ವರ್ಗವೇ ಧರೆಗಿಳಿದು ಬಂದಿದೆಯೋ ಎಂದು ಭ್ರಮಿಸುವಷ್ಟು ನಿಸರ್ಗ ಸೌಂದರ್ಯದ ವಾರಾಶಿ ನಾನಾ ಬಗೆಯ ನೀಲಗಗನಚುಂಬೀ ದ್ರುಮಗಳ ಮಹಾಶ್ರೇಣಿ. ನೀ ಗಗನದ ಹಿನ್ನೆಲೆಯಲ್ಲಿ ಕಾಣಬರುವ ನೈಸರ್ಗಿಕ ಚಿತ್ತಾರ ಚಿತ್ರಕಾರ ಕಲೆಗೆ ವಿಶಿಷ್ಟ ಭಂಗಿಯಲ್ಲಿ ಪ್ರೈಯಾಂತಂತೆ ತೋರುವ ದೃಶ್ಯವನ್ನು ನೋಡುತ್ತ ನಿಂತಳು ವಾಸವಿ. ಅಹ! ಎಂತಹ ಸೌಂದರ್ಯ ? ಭಗವಂತನ ಸ್ವರ್ಗ ಇದೇ ಇರಬಹುದು.

"ಎಲ್ಲರೂ ಈಗ ತಯಾರಾಗಿದ್ದಾರೆ. ಇನ್ನು ಮೈಸೂರು ಪ್ಯಾಲೆಸ ಕಡೆ ಹೋಗಿ ಬರೋಣ."

ಅವಳ ಭಾವಸಮಾಧಿಗೆ ಭಂಗ ಬಂದು ಹಿಂದಿರುಗಿ 'ಹೂಂ' ಎಂದಳು

ಶ್ರೀಧರ ಹೊರಟಾಗ ಐದು ಮಕ್ಕಳೂ ಅಣ್ಣ ಅತ್ತಿಗೆಯರೂ ಹೊರಟಿದ್ದರು. ಎಲ್ಲರೊಂದಿಗೆ ವಾಸವಿ ಹೊರಟಳು. ಮೈಸೂರು ಅರಮನೆಯಲ್ಲದೆ ಇನ್ನೂ ಕೆಲವು ದರ್ಶನೀಯವಾದ ಅರಮನೆಗಳನ್ನು ನೋಡಿಕೊಂಡು ಹಿಂದಿರುಗಿದಾಗ ಸೂರ್ಯ ನಡುನೆತ್ತಿಯಮೇಲೆ ಏರಿದ್ದ.

ಎಲ್ಲರೂ ಮೇಜಿನ ಸುತ್ತ ಕುಳಿತು ತಣ್ಣನೆಯ ಪಾನೀಯ ಹೀರುತ್ತ ಕುಳಿತಾಗ ರಾಜು ನುಡಿದ "ಅಮ್ಮಾ! ನಾನಿಂದು ಸೊಗಸಾದ ಚಿತ್ರ ಬರೆಯುವೆ. ನೀವು ಒಳ್ಳೆ ಕಾವ್ಯ ಸೃಷ್ಟಿ ಮಾಡಿ ಬಿಡಿ!" ಎಳೆಯ ಮುಖ ಆನಂದ ಪ್ರಸನ್ನವಾಯಿತು.

"ಕಾವ್ಯ ಬರೆಯುವುದಕ್ಕೆ ಗಲಾಟೆ–ಗದ್ದಲ ಇದ್ದರೆ ಆಗುತ್ತದೆಯೇ?"

"ಒಂದುವೇಳೆ ನೀವಿಲ್ಲಿ ಒಬ್ಬರೇ ಇರುವುದಾದರೆ ಅಡ್ಡಿಯಿಲ್ಲ. ನಾವು ಊರಿಗೆ ಹೋಗಿ ಹೇಗಾದರೂ ಮನೆಯಲ್ಲಿ ಮಾಡಿಕೊಳ್ಳುತ್ತೇವೆ."

ವಾಸವಿ ಬಾಯ್ದೆರೆಯಲ್ಲಿಲ್ಲ. ಮುಗುಳು ನಕ್ಕಳು ಅಷ್ಟೆ.

"ನೀನಲ್ಲಿ ಕೊಠಡಿಯ ಬಾಗಿಲು ಮುಚ್ಚಿ ಕುಳಿತು ಬಿಡು. ನಾನಿರುವ ತನಕ ಅಡಿಗೆ ಮನೆ ನೋಡಿಕೊಳ್ಳುವೆ. ಏನೇನು ಬರೆಯಬೇಕೋ

ಅದನ್ನೆಲ್ಲಾ ಪಟ್ಟಿಮಾಡಿಕೊ. ಸದ್ದಿಲ್ಲದೆ ಬರೆಯುಬಹುದು," ಎಂದು ಸಲಹೆ ನೀಡಿದಳು ಜಾನಕಿ.

"ಅಕ್ಕಾ, ಕೊಠಡಿ ಬಾಗಿಲು ಮುಚ್ಚಿಕೊಂಡರೂ ಅಂತರಂಗದ ಬಾಗಿಲು ಮುಚ್ಚುವುದು ಹೇಗೆ ? ಈ ಸಂಸಾರದ ಕಾಟ ಒಂದಲ್ಲ ಒಂದು ರೀತಿಯಲ್ಲಿ ಕಾಡುತ್ತಿರುತ್ತದೆ."

"ಈಗ ಬೇಸಿಗೆ ರಜೆ. ಸಧ್ಯ ಮನಸ್ಸಿಗೆ ಹಚ್ಚಿಕೊಳ್ಳುವಂತಾದ್ದೇನಿಲ್ಲ." ಎಂದ ಭಾವ.

ಆ ಮಾತಿಗೆ ಶ್ರೀಧರ ಅಂದ "ಚೆನ್ನಾಗಿ-ರುಚಿರುಚಿಯಾಗಿ ಎರಡು ಹೊತ್ತು ಪ್ರೀತಿಯಿಂದ ಎರಡು ತುತ್ತು ಅನ್ನ ಕಾಣಿಸಿದರೆ ಸಾಕು. ಹೆಂಗಸರ ಕಾವ್ಯಕ್ಕೆ ಎಲ್ಲಿಯ ಪ್ರಸ್ಫುಟತೆ ? ಕಾವ್ಯೋಚಿತವಾದ ಛಂದಸ್ಸು ಎಂದರೆ ಸಾಮಾನ್ಯವೇ ? ಎರಡಕ್ಷರ ಕಲಿತು ಬರೆಯುವೆನೆಂದರೆ ಕಾಗೆ ಕಥೆಯಾದೀತು !"

ವಾಸವಿ ಮಾತಾಡಲಿಲ್ಲ. ಮನಸ್ಸು ಮುದುಡಿಹೋಯಿತು.

"ಹಾಗಲ್ಲ ಶ್ರೀಧರ. ಎಲ್ಲರಿಗೂ ಒಂದೊಂದು ಅವಕಾಶ ಕೊಡುವುದು ಒಳ್ಳೆಯದು. ಅದರಲ್ಲಿ ಗೆದ್ದು ಬಂದರೆ ಮುಂದಿನ ಮಾರ್ಗ ತೆರೆದಂತೆಯೇ."

"ಸೋತರೆ....?" ರಾಮು ಕೇಳಿದ.

"ಅಡಿಗೆ ಮನೆ ಉಂಟೇ ಉಂಟಲ್ಲ."

"ಹಾಗೆನ್ನಬಾರದು. ಮರಳಿಯತ್ನವಮಾಡು. ಮರಳಿಯತ್ನವ ಮಾಡು ಎಂಬುದು ತಿಳಿಯದೇ. ಮತ್ತೆ ಮತ್ತೆ ಪ್ರಯತ್ನಿಸುತ್ತಲೇ ಇದ್ದರೆ ಒಂದಲ್ಲ ಒಂದು ದಿನ ಜಯ ಲಭಿಸುತ್ತೆ ಎಂಬ ನೆಚ್ಚು ಮನದಲ್ಲಿದ್ದರೆ ಸಾಕು ಗೆದ್ದಂತೆಯೇ !"

ಜಾನಕಿಯ ಸಲಹೆಗೆ ಅಭಿನಂದಿಸಿ ನುಡಿದಳು ವಾಸವಿ,

"ನಿಮ್ಮ ಹಾಗೆ ಒಂದು ಸಣ್ಣ ಪ್ರೋತ್ಸಾಹ ನೀಡಿದ್ದರೂ ನಾನು ಎಷ್ಟೋ ಉತ್ತೇಜಿತಳಾಗುತ್ತಿದ್ದೆ. ಕಲೆಯ ಗಂಧ ಇನಿತೂ ಇಲ್ಲದ ಇವರಿಂದಲೇ ನನ್ನ ಸಾಹಿತ್ಯ ಮುದುಡಿತು !"

ಆ ಮಾತಿಗೆ ಪ್ರತಿಯಾಗಿ ರಾಜು ರಾಮು ಇಬ್ಬರೂ ನುಡಿದರು,

"ಅಮ್ಮಾ! ನೀವು ನಮ್ಮ ಬಗ್ಗೆ ಮಾಡುವುದು ಹೀಗೆಯೇ. ಓದಿನೊಂದಿಗೆ ಮಕ್ಕಳ ಅಭಿರುಚಿಯೂ ಸಾಗಲಿ ಎಂದೇಕೆ ನಮ್ಮ ಅಭೀಷ್ಟವನ್ನು ಮಾನಿಸುವುದಿಲ್ಲ ? ನಮ್ಮನ್ನು ಓದು ಓದು ಎಂದು ಪೀಡಿಸುತ್ತೀರಲ್ಲ ? ಎತ್ತು ಏರಿಗೆಳೆದರೆ ಕೋಣ ನೀರಿಗೆಳೆಯಿತು ಎಂಬಂತಾಗಿದೆ ನಂನಮ್ಮ ಅಭಿರುಚಿ."

ಎಲ್ಲರೂ ಒಮ್ಮೆಲೇನಗೆಯು ಗುಲ್ಲೆಬ್ಬಿಸಿದರು.



# ಲ್ಯೂಸಿ ಗಾರ್ಟರ್

## God only knows the truth

ಚೆಸ್ಸಿಂಗ್‌ಟನ್ ಜೂ ಗಾರ್ಡನ್‌ನಲ್ಲಿ ಸಂಧ್ಯಾವಿಹಾರ ನಡೆಸಿದ ಲ್ಯೂಸಿ ಪರಮ ಸುಖಿ.

ಆದರೇನು ?

ವಿಹಾರದಲ್ಲಿ ತನ್ನೊಂದಿಗೆ ಜಾರ್ಜ್ ಗಾರ್ಟರ್ ಇಲ್ಲದುದು ಉತ್ಸಾಹ ಹೀನಕ್ಕೆ ನಾಂದಿ. ಆತನಿಗಾಗಿ ವರ್ಷವೆಲ್ಲಾ ಕಾದರೂ ಅವನು ಇಂದು-ನಾಳೆ ಎಂದು ದಿನ ತಳ್ಳುತ್ತಲೇ ಇದ್ದ. ಅವಳ ಆಸೆ-ಆಕಾಂಕ್ಷೆಗಳನ್ನು ಪೂರೈಸಬೇಕು. ಅವಳೂ ಮನುಷ್ಯಳೇ. ಎಲ್ಲರಿಗಿರುವಂತೆಯೇ ಅವಳಿಗೂ ಆಸೆ-ಪ್ರತ್ಯಾಸೆಗಳ ಅಭಿರುಚಿ ಇರುತ್ತೆ ಎಂಬುದನ್ನು ಎಂದೂ ಗಮನಿಸಿದವನಲ್ಲ ಜಾರ್ಜ್. ಅಂದಿಂದಿಗೂ ಉದಾಸೀನದ ಗಣಿ. ಜಡತನದ ಅಭಿವ್ಯಕ್ತಿ. ಅವನ ದಿವ್ಯ ನಿರ್ಲಕ್ಷ್ಯದ ಆಳವನ್ನು ಕಂಡನಂತರ ತಾನೇ ಹೋಗಿ ಬರಲು ನಿರ್ಧರಿಸಿದಳು ಲ್ಯೂಸಿ ಗಾರ್ಟರ್. ಆದೂ ಕೂಡ ಅಷ್ಟು ಸುಲಭವಲ್ಲ. ಹಗಲೆಲ್ಲ ಕೆಲಸ, ರಾತ್ರಿ ಓದು. ಪ್ರಯತ್ನಿಸಿದರೂ ಬಿಡುವು ದೊರೆಯುವುದಿಲ್ಲ. ಮೇಲಾಗಿ, ಒಂದು ಚಿಕ್ಕ ಮತ್ತು ಚೊಕ್ಕವಾದ ಮನೆಗಾಗಿ ಹುಡುಕಾಟ. ತಾನಿರುವ ಮನೆ ಏನೇನೂ ಚೆನ್ನಿಲ್ಲ. ಮನೆಯ ಜಾಹೀರಾತನ್ನು ನೋಡಲು ಅವರಿವರ ಮನೆಯ ಪತ್ರಿಕೆಗಳನ್ನು ಓದಿ ತಿಳಿಯಬೇಕು. ಅದಕ್ಕೂ ಜಾರ್ನ್ ಗಾರ್ಟರ್ ತಲೆ ಕೊಡುವವನಲ್ಲ. ಬೆಳಿಗ್ಗೆ ಎದ್ದು ಚಹ ಮಾಡಿ ಕುಡಿದು ಫ್ಯಾಕ್ಟರಿಗೆ ಹೋಗಿ ಬಂದರೆ ಮುಗಿಯಿತು.

ಸಂಜೆಯಲ್ಲಿ ಅಗತ್ಯವಿದ್ದರೆ ಬಜಾರ್. ಇಲ್ಲದಿದ್ದರೆ ಟಿ.ವಿ. ಅಷ್ಟೇ ಅವ
ಕೆಲಸ. ನೆರೆ ಹೊರೆಯವರೆಲ್ಲಾ ಮಡದಿಯ ಅರ್ಧಭಾರ ಇಳಿಸುವುದನ್ನು
ಸ್ವಂತ ಕಣ್ಣುಗಳಿಂದ ನೋಡಿಯೂ ಆತ ತಲೆಬಾಗುವವನಲ್ಲ. ಜೂ
ಗಾರ್ಡನ್ನಿನಲ್ಲಿ ಇತರೆ ಸಂದರ್ಶಕರು ಜೋಡಿ ಜೋಡಿಯಾಗಿ ಬಂದಿದಾರೆ
ಕೈ ತುಂಬ ತಿಂಡಿ ತಿನಿಸುಗಳು, ಬಾಯಿ ತುಂಬಾ ನಗೆ ಮಾತುಗಳು, ಪ್ರಾಣಿ
ಗಳೊಡನೆ ಭೇಟಿ, ಆಟದ ಕೂಟ. ಅಹಹ! ಎಂತಹ ಮೋಜು ? ಆನಂದ
ಭೋಗ ? ತಿಂಡಿ ತಿನಿಸುಗಳನ್ನು ಕೊಟ್ಟು ಪ್ರಾಣಿಗಳನ್ನು ಸ್ನೇಹಿತರಂತೆ
ಮುದ್ದಿಸುತ್ತಾರೆ. ಪೆಂಗ್ವಿನ್ ಪಕ್ಷಿಗಳು ಬಹುಕಾಲದ ಸ್ನೇಹಿತರಂತೆ ಸುತ್ತ
ಮುತ್ತ ಸುಳಿಯುತ್ತವೆ. ಹುಲಿಯನ್ನು ಬಿಟ್ಟರೆ ಮತ್ತೆಲ್ಲಾ ಪ್ರಾಣಿಗಳೂ
ಬಹುಮಟ್ಟಿಗೆ ಸ್ನೇಹಿತರೇ. ಮಕ್ಕಳ ಒಂಟೆ ಸವಾರಿ, ಲ್ಲಾಮಗಳಿಂದ
ಎಳೆಯಲ್ಪಡುವ ಗಾಡಿಗಳು ಮಕ್ಕಳ ಮನಸ್ಸನ್ನು ಸ್ವರ್ಗಕ್ಕೆ ಹಚ್ಚುತ್ತವೆ.
ಮಕ್ಕಳು ನಿಗಿನಿಗಿ ನಲಿಯುತ್ತಾರೆ. ಎಲ್ಲರೂ ಅಲ್ಲಲ್ಲಿ ಕುಳಿತು ತಿಂಡಿ ತಿನ್ನು
ತ್ತಾರೆ. ನದಿಗಳಲ್ಲಿ ದೋಣಿ ವಿಹಾರ ; ಉದ್ಯಾನದಲ್ಲಿ ಗಾಳಿ ವಿಹಾರ ;
ಇನ್ನೂ ಏನೆಲ್ಲಾ ಅನುಭೋಗದಲ್ಲಿ ಮೈಮರೆತ ಜನರಾಶಿಯನ್ನು ನೋಡಿ
ದರೆ ತನಗೆ ಒಡಲೆಲ್ಲ ಸಂಕಟ. 'ಲಿಟಲ್ ವೆನಿಸ್ ಮತ್ತು ಜೂಯಲಾಜಿಕಲ್
ಗಾರ್ಡನ್'ನಲ್ಲಿ ತಾನು ಓಡಾಡಿ ಸಂತಸ ಪಟ್ಟಿದ್ದು ಶಾಲಾ ವಿದ್ಯಾರ್ಥಿನಿ
ಯಾಗಿದ್ದಾಗ. ಅನಂತರ ಇದೇ ಮೊದಲಿಗೆ ಬಂದಿದ್ದಾಳೆ ಲ್ಯೂಸಿ.

* * * *

ಲ್ಯೂಸಿ ಕಟ್ಟಾ ಕೆಲಸಗಾತಿ. ತನ್ನ ಸಮಸ್ಯೆಗಳನ್ನು ಆದಷ್ಟು
ಬೇಗನೆ ಬಗೆಹರಿಸಿಕೊಳ್ಳುವ ಹಂಬಲ ಮನದಲ್ಲಿ. ಜಾರ್ಜ್ ಗಾರ್ಟರ್ ಇದರ
ಲೆಲ್ಲಾ ತಲೆ ಹಾಕುವವನೇ ಅಲ್ಲ. ಇದ್ದುದರಲ್ಲೇ ಸಂತೃಪ್ತಿ. ತನ್ನ ಕೆಲಸ
ಮುಗಿದ ನಂತರ ಹಾಯಾಗಿದ್ದುಬಿಡುವ. ಭಾನುವಾರ ಗೆಳೆಯರು ಅಥವಾ
ಪುಸ್ತಕಗಳು ಅವನ ಸಂಗಾತಿಗಳು. ಆಗ ಆವಳು ಅವನನ್ನು ಗಟ್ಟಿಯಾಗಿ
ಅಲ್ಲಾಡಿಸಿ "ನೀನೊಂದು ಮರದ ಬೊಂಬೆ! ನಾನು ಕಷ್ಟಪಡುವುದು
ನಿನಗೆ ಅರ್ಥವೇ ಆಗುವುದಿಲ್ಲ. ಜೂಯಲಾಜಿಕಲ್ ಗಾರ್ಡನ್ನಿನ ಸಂಧ್ಯಾ
ವಿಹಾರದ ಆಸೆ ಇಂದು ನಿನ್ನೆಯದಲ್ಲ. ನಿನ್ನ ಕಾದು ಕಾದು ನಾನೊಬ್ಬಳೇ
ಹೋಗಿ ಬಂದೆ. ನನ್ನ ಅದೊಂದು ಪುಟ್ಟ ಆಸೆಯನ್ನು ಪೂರೈಸಿಕೊಳ್ಳ

ಬೇಕಾದರೆ ಸಾಕು ಬೇಕಾಯಿತು. ಇಂಥ ಜೀವನವಾದರೂ ಏಕಿರಬೇಕು? ನಿನಗೆ ಇದೆಲ್ಲಾ ಏಕೆ ಅರ್ಥವಾಗುವುದಿಲ್ಲ? ನಿನ್ನಲ್ಲಿ ಮನುಷ್ಯತ್ವವೇ ಇಲ್ಲ ಎಂದೇನು?"

ಅವನು 'ಹಿಹ್ಹೀಹ್ಹೀ!' ಎಂದು ನಕ್ಕು ಬಿಟ್ಟ. ಅವಳ ಊರ್ಧ್ವಮುಖೀ ಜೀವನದ ಸರ್ವೋತ್ಸಾಹಕ್ಕೆ ತಣ್ಣೀರೆರೆಚುವಂತೆ.

ಅವಳು ಶಿಲಾ ಮೂರ್ತಿಯಂತೆ ನಿಶ್ಚಲ ಭಂಗಿಯಲ್ಲಿ ಅವನ ಮುಖ ಭಾವವನ್ನು ತೀರ ಅಸಮಾಧಾನದಿಂದ ನೋಡಿದಳು.

"ಲ್ಯೂಸೀ ಲವ್! ಯಾವಾಗಲಾದರೊಮ್ಮೆ ಒಂದುವಾರ ರಜೆ ತೆಗೆದುಕೊಳ್ಳುವೆ. ಆಗ ಇಬ್ಬರೂ ಲಂಡನ್ ನಗರದ ಪರಿಸರವನ್ನೆಲ್ಲಾ ಒಂದೇ ಬಾರಿಗೆ ಜಾಲಾಡಿ ಬಿಡೋಣ."

"ನೀನು ಹೀಗೆನ್ನುತ್ತಾ ಎಷ್ಟೋ ವರ್ಷಗಳೇ ಉರುಳಿಹೋದುವು."

"ಈ ಸಲಿ ಹಾಗಲ್ಲ ಡಾರ್ಲಿಂಗ್! ನಿನ್ನಾಸೆ ಏನೇನಿದೆ, ಎಲ್ಲೆಲ್ಲಿ ಸುತ್ತಬೇಕು? ಎಲ್ಲಾ ಪಟ್ಟಿ ಮಾಡಿಟ್ಟುಕೊ. ನಿನ್ನೊಂದಿಗೆ ಸ್ವರ್ಗಕ್ಕೂ ಬರಲು ನಾನು ಸಿದ್ಧ!"

ಅವಳು ಸಿಟ್ಟಿನಿಂದ ಅಣಕಿಸಿದಳು.

ಅವನು ಕಿಲಕಿಲ ನಕ್ಕು ಅವಳ ಸಿಟ್ಟನ್ನು ನಿವಾರಿಸಿದ.

* * * *

ಬೆಳಗಿನ ಒಂಭತ್ತರ ಸಮಯ. ಇನ್ನರ್ಧಗಂಟೆಯ ಒಳಗಾಗಿ ತಾನೂ ಕೆಲಸಕ್ಕೆ ಹೊರಡಬೇಕು. ಕಿಟಕಿಯಲ್ಲಿದ್ದ ಧೂಳನ್ನು ಒರಿಸುತಿದ್ದ ಲ್ಯೂಸಿಗೆ ಪ್ರಾಕಾರದ ಬಾಗಿಲು 'ಕಣಕ್' ಎಂದು ಸದ್ದು ಮಾಡಿ ಯಾರೋ ಬಂದು ದನ್ನು ಸೂಚಿಸಿತು. ಮರುಕ್ಷಣದಲ್ಲೇ ತಲೆಬಾಗಿಲ ಕರೆ ಗಂಟೆ ಸದ್ದು ಮಾಡಿತು.

ಟ್ರೆಣ್. ಟ್ರೆಣ್. ಟ್ರೆಣ್. ಟ್ರೆಣ್.

ಲ್ಯೂಸಿ ಕದ ತೆರೆದಳು. ಬಂದವನು ಪೀಟರ್.

"ಆಂಟಿ! ಅಂಕಲ್ ಜೋ ತೀರಿಕೊಂಡದ್ದು ನಿನಗೆ ತಿಳಿಯಿತೇ?"

"ಓ ಮೈ ಗಾಡ್ ! ಕಳೆದವಾರ ಮಾರ್ಕೆಟ್ಟಿನಲ್ಲಿ ಕಂಡಿದ್ದೆ. ಚೆನ್ನಾಗಿದ್ದ. ಏನಾಯ್ತು ? ಛೆಃ ! ಹೇಗೆ ಬಂತು ಅಂತ್ಯ" ಆಶ್ಚರ್ಯದಿಂದ ಕೇಳಿದಳು ಲ್ಯೂಸಿ.

ನಿನ್ನೆಯೂ ಆತ ವಾಕಿಂಗ್ ಹೋಗಿ ಬಂದಿದ್ದಾನೆ. ಚೆನ್ನಾಗಿಯೇ ಇದ್ದ. ರಾತ್ರಿ ಮಲಗಿದ್ದವನು ಬೆಳಗ್ಗೆ ಏಳಲಿಲ್ಲವಂತೆ!"

"ಯಾರಿದ್ದರು ಜೊತೆಗೆ ?"

"ಯಾರೂ ಇರಲಿಲ್ಲ."

"ಮತ್ತೆ ಹೇಗೆ ಗೊತ್ತಾಯ್ತು ?"

"ಅವನು ಮುಂದಿನ ಕದ ಬೋಲ್ಟ್ ಹಾಕುತ್ತಿರಲಿಲ್ಲ. ಬೆಳಗ್ಗೆ ಪೇಪರ್ ಕೊಡಲು ದಿನವೂ ಹೋಗುತಿದ್ದವನು ನಾನೇ. ಈದಿನ ಬಿಡುವಾಗದಿದ್ದುದರಿಂದ ನಾನು ಹೋಗಲಿಲ್ಲ. ಮಧ್ಯಾಹ್ನ ಪಪ್ಪ ಪತ್ರಿಕೆ ತೆಗೆದುಕೊಂಡು ಹೋದಾಗಲೇ ಗೊತ್ತು. ನೋಡು ! ರಾತ್ರಿಯ ಊಟದ ಪ್ಲೇಟು, ಬಸಿ, ಪಾತ್ರೆ ಎಲ್ಲವನ್ನೂ ತೊಳೆದು ಒರಿಸಿಟ್ಟದ್ದಾನೆ. ಪ್ರತಿಯೊಂದು ವಸ್ತುವನ್ನೂ ಚೆಂದವಾಗಿ ಹೊಂದಿಸಿಟ್ಟದ್ದಾನೆ. ಯಾವೊಂದು ಲೋಪ ದೋಷವೂ ಕಾಣಿಸುತ್ತಿಲ್ಲ. ಅಂದಮೇಲೆ, ನಿನ್ನೆ ರಾತ್ರಿಯವರೆಗೂ ಚೆನ್ನಾಗಿದ್ದ ಎಂಬುದು ಸುವ್ಯಕ್ತ !"

"ಹಾ....!" ಎಂದು ನಿಟ್ಟುಸಿರು ಬಿಟ್ಟ ಲ್ಯೂಸಿ ಮತ್ತೆ ಮುಂದುವರಿದಳು "ಪಾಪ ! ಒಬ್ಬೊಂಟಿಗ. ಅಂತಹ ಸುಖವಾದ ಅಂತ್ಯ ಬಂದುದು ಒಳೆಯದೇ. ಆದರೆ...."

"ಆದರೆ, ಏನು ಆಂಟೀ ?"

"ಅಂಕಲ್ ಜೋ ಗಟ್ಟಿಮುಟ್ಟಾಗಿದ್ದ. ಇನ್ನೂ ನಾಲ್ಕಾರು ವರ್ಷ ಇದ್ದಿದ್ದರೂ ಯಾರಿಗೂ ಕಷ್ಟವಾಗುತ್ತಿರಲಿಲ್ಲ. ಮುಖ್ಯವಾಗಿ ಅಂತಹವನಿಗೆ ದೇವರು ಆಯುಸ್ಸು ಕೊಡಬೇಕಿತ್ತು !"

"ಹೋಗಲಿ ಬಿಡು. ಇನ್ನೂ ನಾಲ್ಕಾರು ವರ್ಷವೆಂದರೆ ಯಾವ ಭಂಗ ಬನ್ನ ಬರುತಿತ್ತೋ."

"ಅದೂ ನಿಜವೇ. ಚೆನ್ನಾಗಿದ್ದಾಗ ಹೋಗಿದ್ದು ಒಳ್ಳೆಯದಾಯ್ತು."

"ಹೇಗೆ ಮಲಗಿದ್ದಾನೆ ಆಂಟೀ ! ನೀನು ಹೋಗಿ ನೋಡು ! ಹೊದ್ದ ಹೊದ್ದಿಕೆ-ದುಪ್ಪಟಿ ಒಂದಿಷ್ಟೂ ಅಲ್ಲಾಡಿಲ್ಲ. ಯಾರೋ ಹೊದಿಸಿ ಅಂದ ಚೆಂದ ಮಾಡಿದಷ್ಟು ಸೊಗಸಾಗಿದೆ. ಎಲ್ಲಿಯೂ ಮುದುರಿಲ್ಲ ಹೊದಿಕೆ ! ಎಂತಹವರಿಗೂ ಆಶ್ಚರ್ಯದ ಕಟ್ಟೆ ಬಿರಿಯುತ್ತದೆ. ಅಹಹ ! ಆಶ್ಚರ್ಯ ! ಪರಮಾಶ್ಚರ್ಯ !!" ಹುಡುಗ ತಲೆದೂಗಿದ.

"ಅವನು ಮೊದಲಿಂದಲೂ ಹಾಗೆಯೇ. ಬಹಳ ಅಚ್ಚುಕಟ್ಟು ಅಂತೂ, ದೇವರು ಅವನಿಗೆ ಅಂತಹ ಅಂತ್ಯವನ್ನೇ ಕೊಟ್ಟನಲ್ಲಾ ಅದೇ ಸಾಕು." ಎಂದ ಅವಳು ಪುನಃ ಕೇಳಿದಳು "ಓ, ಪೀಟರ್ ! ನಿನ್ನ ತಂದೆಯೇ ಮುಂದಿನ ಕಾರ್ಯ ನೆರವೇರಿಸಬೇಕಷ್ಟೆ ? ಅವನ ಮಗ ಎಲ್ಲಿದ್ದಾನೆ. ಅವನಿಗೆ ವಿಚಾರ ತಿಳಿಸಿದಿರಾ !"

"ತಿಳಿಸುವುದು ಹೇಗೆ ಆಂಟೀ ? ಅವನು ಆಫ್ರಿಕಾದಲ್ಲಿ ಎಲ್ಲಿದ್ದಾನೋ ದೇವರಿಗೇ ಗೊತ್ತು. ನನ್ನ ತಂದೆಯೇ ಇದನ್ನೆಲ್ಲಾ ನೋಡಿಕೊಳ್ಳಬೇಕು."

"ಅವನು ಮೊದಲೇ ಇದನ್ನೆಲ್ಲಾ ಹೇಳಿದ್ದ ಅಲ್ಲವೇ ?"

"ವಿಲ್ ಕೂಡ ಮಾಡಿದ್ದಾನೆ. ಅವನ ವಸ್ತುಗಳನ್ನು ನಮಗೇ ಬಿಟ್ಟಿದ್ದಾನೆ."

C C C C

ಜಾರ್ಜ್ ಗಾರ್ಟರ್ ಮನೆಗೆ ಬಂದಾಗ ಸಂಜೆ ಆರು ಗಂಟೆ.

ಲ್ಯೂಸಿ ಕದ ತೆರೆದು ಕೇಳಿದಳು "ಅಂಕಲ್ ಜೋ ಮರಣಿಸಿದುದು ಗೊತ್ತೆ ?"

"ಇಲ್ಲವಲ್ಲಾ."

"ಅಹಹ್ಹಾ ! ಎಂತಹ ಸುಖ ಸಾವು. ಹೊದ್ದ ಹೊದ್ದಿಕೆ ಅಲ್ಲಾಡಿಲ್ಲ. ನಿದ್ದೆ ಮಾಡುತಿದ್ದಂತೆ ಮಲಗಿದ್ದಾನೆ! ಅವನು ಇದ್ದಾಗಲಂತೂ ಅಚ್ಚು ಕಟ್ಟು. ಸತ್ತಾಗಲೂ ಎಂತಹ ಅಚ್ಚುಕಟ್ಟು ಹೋಗಿ ನೋಡು !"

ಜಾರ್ಜ್ ಗಾರ್ಟರ್ ಗಂಭೀರ ಭಾವದಿಂದ ನಿಂತ. ಜೋ-ಗೆ ಎಪ್ಪತ್ತರ ವಯಸ್ಸು. ತುಂಬ ಗಟ್ಟಿ ಮುಟ್ಟಾಗಿದ್ದ ಕೂಡ. ಸುಖವಾಗಿ ಪ್ರಾಣ ಬಿಟ್ಟದ್ದು ವಿಶೇಷವೇ.....ಎನಿಸಿತು.

ಲ್ಯೂಸಿ ಹೇಳಿದಳು "ಈ ದಿನವೇ ಅವನ ಸಮಾಧಿ ಆಗುತ್ತದೆ. ಅನಂತರ ಆ ಮನೆಯನ್ನು ನಮಗೆ ಕೊಡುತ್ತಾರೆಯೋ ಕೇಳುವೆ. ಬಾಡಿಗೆಯೂ ಹೆಚ್ಚಲ್ಲ. ಯಾರಾದರೂ ಮೊದಲೇ ಅದಕ್ಕೆ ಕೈ ಹಾಕಿದರೆ ತಪ್ಪಿಹೋಗುತ್ತೆ. ಕ್ರಿಮೇಶರ್ ಆದನಂತರ ನೀನೊಮ್ಮೆ ಕೇಳಿನೋಡು. ನಾನೂ ಕೇಳಿಕೊಳ್ಳುವೆ. ಮನೆ ಚಿಕ್ಕದಾದರೂ ಚೊಕ್ಕದಾಗಿದೆ. ನನಗೆ ಈ ಮನೆಯಲ್ಲಿ ಹೆಣಗೀಹೆಣಗಿ ಸಾಕಾಯ್ತು.

ಆ ಮಾತಿಗೆ ಯೋಚಿಸಿ ಜರ್ಾ ಗಾರ್ಟರ್ ಅಂದ "ಈ ಮನೆಯೇನೂ ಅಂತಹ ಕೆಟ್ಟಿಲ್ಲ ಬಿಡು. ನೀನು ಸುಮ್ಮನೆ ಪೇಚಾಡುತ್ತಿ ಅಷ್ಟೆ."

"ನಿನಗೆ ನನ್ನ ಕಷ್ಟ ಹೇಗೆ ಗೊತ್ತಾಗಬೇಕು? ನೀನು ಯಾವುದಕ್ಕೂ ತಲೆ ಕೊಡುವವನಲ್ಲ. ಅಂತಲೇ ನನ್ನ ಕಷ್ಟದ ಅರಿವಿಲ್ಲ!"

"ನಿನ್ನದು ಉತ್ಪ್ರೇಕ್ಷೆ ಬಿಡು!"

"ಛೀ! ನೀನೊಬ್ಬ ಸೋಮಾರಿ!"

"ಏನಾದರೂ ಅಂದುಕೋ. ನಿನಗೋಸ್ಕರ ಅಂಕಲ್ ಜೋ ಮನೆಯನ್ನು ದಕ್ಕಿಸಿಕೊಳ್ಳಲು ಪ್ರಯತ್ನಿಸುವೆ. ಆದರೂ, ನನಗೆ ಈ ಮನೆಯೇ ಸಾಕು ಎನಿಸುತ್ತದೆ."

"ಈ ಮನೆ ಕೆಲಸ ನೀನು ಮಾಡಿದ್ದಿದ್ದರೆ ನಿನಗೆ ಸ್ವಲ್ಪವಾದರೂ ತಿಳಿಯುತಿತ್ತು. ನೀನು ಗೂಳಿಯಂತೆ ತಿಂದುಂಡವನು. ನಿನಗೆ ಹೇಗೆ ಅರ್ಥವಾಗಬೇಕು?"

ಅವನು ಸುಮ್ಮನಾದ. ಸೋಪ್ ಫ್ಯಾಕ್ಟರಿಯಲ್ಲಿ ಎಂಟು ಗಂಟೆ ಕೆಲಸ. ರಾತ್ರಿ ಪಾಳಿಯೂ ಉಂಟು. ಆಗಾಗ ನಿದ್ದೆಗೆಡುವುದರಿಂದ ದೇಹ ಸೋಲುತ್ತದೆ. ಮೇಲಾಗಿ ಮನೆ ಕೆಲಸ ಇಷ್ಟವೂ ಇಲ್ಲ. ಕೇವಲ ಇಬ್ಬರಿಗಾಗಿ ಅಡಿಗೆಯ ನಿರ್ವಹಣೆ ಅಂತಹ ಕಷ್ಟವೇನಲ್ಲ ಎಂಬ ನಂಬುಗೆ. ಆದ್ದರಿಂದ ಮಡದಿಯ ಕಿರಿಕಿರಿಗೆ ಗಮನ ಕೊಡುವವನೇ ಅಲ್ಲ. ಅವಳು ಹೇಳಿದ್ದಕ್ಕೆಲ್ಲಾ 'ಹ್ಞೂ' ಎಂದಷ್ಟು ನುಡಿದು ಸುಮ್ಮನಾಗುತ್ತಾನೆ. ಊಟದಲ್ಲಿ ವಿಶೇಷವಿರಬೇಕು ಎಂಬ ಆಸೆಯೂ ಇಲ್ಲ. ಮನೆಯಲ್ಲಿ ಅಚ್ಚುಕಟ್ಟು ಮತ್ತೊಂದು ಮಗದೊಂದು ಇರಬೇಕೆಂಬ ಬಯಕೆಯೂ ಇಲ್ಲ. ಹೇಗಾದರೂ ಸರಿಯೆ. ಹೇಗಿದ್ದರೂ ಸರಿಯೇ. ನಿರಾಳವಾಗಿದ್ದು ಬಿಡುತ್ತಾನೆ.

ಎಲ್ಲದರಲ್ಲೂ ಕ್ರಮವತ್ತಾಗಿರಬಯಸಿದ್ದ ಮಡದಿಗೆ ಕಿರಿಕಿರಿ-ಅಸಮಾಧಾನ. ಇನ್ನೂ ಏನೇನೋ.....

*  *  *  *

ಅಂಕಲ್ ಜೋ-ನ ಪಾರ್ಥಿವ ಶರೀರಕ್ಕೆ ಅಂತ್ಯಸಂಸ್ಕಾರ ನಡೆಸಿದ ನಂತರ ಆ ಫ್ಲಾಟನ್ನು ಬಹಳ ಕಷ್ಟದಿಂದ ಪಡೆದುಕೊಂಡಳು ಲ್ಯೂಸೀ ಗಾರ್ಟರ್. ಮನೆಯಲ್ಲಿನ ವಸ್ತು ಸಮಸ್ತವನ್ನೂ ಸ್ಥಳಾಂತರಿಸಲೂ ಜಾರ್ಜ ರಜೆ ತೆಗೆದುಕೊಳ್ಳಲಿಲ್ಲ. ಆಕೆಯೇ ಎಲ್ಲಕ್ಕೂ ತಲೆಗೊಡಬೇಕಾಯಿತು. ಹಳೆಯ ಬಿಲ್ಲುಗಳನ್ನು ನೋಡಿ ಹಣ ಕಟ್ಟಿದವಳೂ ಅವಳೇ. ಹೊಸ ಮನೆಯ ಬಾಡಿಗೆ ಹೆಚ್ಚು ಎಂಬ ಅಸಮಾಧಾನ ಅವನಿಗೆ. ಹೆಚ್ಚಿನ ಬಾಡಿಗೆಯನ್ನು ನಾನೇ ಪೂರೈಸುವೆ ಎಂದು ಅವಳು. ಅಂತೂ, ಲ್ಯೂಸಿಯು ಹಟದಿಂದ ತಾನೇ ಮನೆಯಲ್ಲಿ ಯಾರ ಸಹಾಯವೂ ಇಲ್ಲದೆ ಬದಲಾಯಿಸಿ ನೇರ್ಪಡಿಸಿಕೊಂಡಳು. ಒಮ್ಮೆ ಪೀಟರ್ ನಾನು ಸಹಾಯ ಮಾಡುವೆ ಎಂದಿದ್ದ. ಆದರೆ, ಆಟಂಗುಳಿಯಾದ ಅವನಿಗೆ ಅದು ಆಗಲೇ ಮರೆತು ಹೋಯಿತು. ಲ್ಯೂಸಿ ತಾನೆ ಎಲ್ಲಕ್ಕೂ ಟೊಂಕ ಕಟ್ಟಿದಳು. ಮನೆ ಬದಲಾಯಿತು. ಎರಡು ದಿನ ಸಂಬಳವಿಲ್ಲದ ರಜೆ. ಅಲ್ಲಿಗೂ ಇಲ್ಲಿಗೂ ಎಣೆಯಿಲ್ಲದ ಓಡಾಟ.

ಜಾರ್ಜ ಗಾರ್ಟರ್ ನೇರವಾಗಿ ಕಾರ್ಖಾನೆಯಿಂದ ಬಂದುದು ಅಂಕಲ್ ಜೋ ಮನೆಗೆ. ಅವನ ವಸ್ತು ಸಮಸ್ತವೂ ಪೀಟರ್‌ನ ತಂದೆಗೆ ಸೇರಿದ್ದು. ತನ್ನ ಭಾಗಕ್ಕೆ ಅಗತ್ಯವೆನಿಸಿದ ಕೆಲವು ವಸ್ತುಗಳನ್ನು ಇಟ್ಟುಕೊಂಡು ಉಳಿದವನ್ನು ವೃದ್ಧಾಶ್ರಮಕ್ಕೆ ದಾನ ಮಾಡಿದ್ದ. ಅಂಕಲ್ ಜೋ-ನ ಚಿತ್ರಪಟವೊಂದನ್ನು ಮಾತ್ರ ಅವನ ನೆನಪಿಗಾಗಿ ಉಳಿಸಿ ಹೋಗಿದ್ದ. ಮೇಜಿನ ಮೇಲಿಡಬಹುದಾದ ಚೌಕಟ್ಟನ್ನು ಹೊಂದಿದ್ದ ಅದು ಗುರುಭಾವದಿಂದ ಪರಿಶೋಭಿಸುತ್ತದೆಯೆಂದು ಕದಲಿಸದೆ ಇಟ್ಟುಕೊಂಡಳು ಲ್ಯೂಸಿ. ಅದು ದೃಷ್ಟಿಗೆ ಬಿದ್ದಾಗ "ಇದೇಕೆ ಇಲ್ಲಿ ?" ಎಂದ ಜಾರ್ಜ ಗಾರ್ಟರ್, ಹುಬ್ಬೇರಿಸಿ.

"ಇರಲಿ ಬಿಡು, ಹಿರಿಯ ವ್ಯಕ್ತಿ."

ಜಾರ್ಜ ಗಾರ್ಟರ್ ಆ ಮಾತಿಗೆ ಸುಮ್ಮನಾದ.

"ನನಗೆ ವಿಶ್ವದ ಪ್ರೇಕ್ಷಣೀಯ ಸ್ಥಳಗಳಿಗೆ ಆಗಾಗ್ಗೆ ಹೋಗಿ ಬರಬೇಕೆಂದು ಇಚ್ಛೆ. ನೀನೊಬ್ಬ ಜಗಮೊಂಡ. ನಿನಗೆ ಜೀವವೂ ಇಲ್ಲ; ಹೃದಯವೂ ಇಲ್ಲ, ಹೀಗೆ ದಿನವೆಲ್ಲಾ ಕಷ್ಟಪಟ್ಟು ಕೆಲಸ ಮಾಡುವ ನಮಗೆ ಒಂದಿಷ್ಟು ಮನರಂಜನೆ ಬೇಡವೇ? ಹೀಗಿದ್ದರೆ ಇದೊಂದು ಮಾನವ ಜೀವನವೇ ಅಲ್ಲ. ಪಶು ವರ್ಗಕ್ಕೂ ನಮಗೂ ವ್ಯತ್ಯಾಸ ಏನಿಲ್ಲ ಬಿಡು."

"ಹೇಗೆ ಅಂದುಕೊಂಡರೆ ಹಾಗೆ. ನನಗೆ ಹೀಗಿರುವುದೇ ಚೆಂದ. ಗದ್ದಲ–ಗಲಾಟೆ ಯಾರಿಗೆ ಬೇಕು? ಈಗ ಮನರಂಜನೆಗೇನು ಕಡಿಮೆ? ಮನೆಯಲ್ಲಿ ಟಿ.ವಿ. ಕೆಲಸ ಮಾಡುವಲ್ಲಿ ಜನ; ಇಷ್ಟಿದ್ದರೆ ಸಾಲದೇ? ಬಜಾರ್ ಕಡೆ ಹೋದರೆ ಮನರಂಜನೆಗೇನು ಕೊರತೆ? ಇದ್ದುದರಲ್ಲೇ ಸಮಾಧಾನ ಪಡೆಯುವ ಉದಾರ ಮನಸ್ಸು ಇರಬೇಕು. ಬೆಳದಿಂಗಳಿರುವಾಗ ಬಿಸಿಲು ಮಚ್ಚಿನ ಮೇಲೆ ಅಥವಾ ಗಾಳಿ ಸವಾರಿ ಮಾಡಿದರೆ ಸಾಕಷ್ಟು ಮನರಂಜನೆ ದೊರೆಯುತ್ತೆ. ಸುಮ್ಮ ಸುಮ್ಮನೆ ಅತೀ ಆಸೆ ಇಟ್ಟುಕೊಳ್ಳಬಾರದು. ಎಂದಾದರೊಮ್ಮೆ ಅಂತಹ ಅವಕಾಶ ಸಿಕ್ಕಿದರೆ ಅನುಭವಿಸಿದರಾಯ್ತು." ಉತ್ತರ ಮಾಗಿಯ ಶೀತಕ್ಕಿಂತಲೂ ಶೀತಲವಾಗಿ ಹೊಮ್ಮಿತು.

"ಸರಿ ಬಿಡು. ನೀನೊಂದು ಮರಜೀವ. ನಿನ್ನಂತೆಯೇ ನಾನೂ ಉದಾಸೀನ ತಳೆದಿದ್ದರೆ ಈ ಮನೆ ನನಗೆ ದಕ್ಕುತ್ತಲೇ ಇರಲಿಲ್ಲ!"

"ಯಾವುದು ಪ್ರಾಪ್ತಿಯೋ ಅದು ಹೇಗಾದರೂ ಲಭಿಸುತ್ತೆ. ಇಷ್ಟು ಪ್ರಯತ್ನಿಸದಿದ್ದರೂ ತಾನಾಗಿಯೇ ಲಭಿಸುತಿತ್ತೋ ಏನೋ."

ತುಂಟ ನಗೆ ಬೀರಿದ ಜರ್ಾ ಗಾರ್ಟರ್.

ಲ್ಯೂಸಿ ಸಿಟ್ಟಿನಿಂದ ಎದ್ದು ಹೋದಳು.

ಸಂಜೆಯ ಊಟ ಮುಗಿಸಿ ಇಬ್ಬರೂ ಬಜಾರ್ ಕಡೆಗೆ ಹೋಗಿ ಬೇಕಾದುದನ್ನು ಕೊಂಡುತಂದರು. ಜೋಡಿಸುವುದನ್ನು ಜೋಡಿಸಿ ಬಸಿ ಬಟ್ಟಲುಗಳನ್ನು ತೊಳೆದು ಟಿ.ವಿ.ಯ ಮುಂದೆ ಕುಳಿತಾಗ ರಾತ್ರಿ ಒಂಭತ್ತು ಗಂಟೆ. ತಣ್ಣನೆಯ ಚಳಿಗಾಳಿ ಕಿಟಕಿಯಲ್ಲಿ ತೂರಿ ಬಂದು ಮುಖ ಮೈಯನ್ನು ಮುದ್ದಿಸುತಿತ್ತು. ಹಾ! ಎಂತಹ ಶೀತಲತೆ!

* * * *

ಒಳ ಕೋಣೆಯಲ್ಲಿ ನಿಲುವುಗನ್ನಡಿಯ ಬಳಿ ಸಣ್ಣ ಕಟ ಕಟ ಸದ್ದು. ಇಲಿ ಸೇರಿಕೊಂಡಿರಬಹುದು ಎನಿಸಿದಾಗಲೇ ಪುನಃ ಸದ್ದು. ರಾತ್ರಿಯ ಸಣ್ಣ ಕೆಂಪು ದೀಪ ಉರಿಯುತಿದ್ದುದರಿಂದ ಮೆಲ್ಲಗೆದ್ದು ಡ್ರೆಸ್ಸಿಂಗ್ ರೂಂ ಕಡೆ ಹಣಿಕಿದಳು ಲ್ಯೂಸಿ. ನೋಡಿದರೆ ಎಂತಹ ಆಶ್ಚರ್ಯ! ಕನ್ನಡಿಯ ಮುಂದೆ ಅಂಕಲ್ ಜೋ! ತಕ್ಷಣವೇ ಆ ಛಾಯೆ ಮಾಯವಾಯಿತು.

"ಜಾರ್ಜ್....ಜಾರ್ಜ್ !" ಕೂಗಿದಳು ಲ್ಯೂಸಿ.

"ಏನು.........ಏನು ?"

"ಅಂಕಲ್ ಜೋ !"

"ನಿನಗೆ ಹುಚ್ಚು !" ನಕ್ಕುಬಿಟ್ಟ ಜಾರ್ಜ್ ಗಾರ್ಟರ್.

ಲ್ಯೂಸಿ ಗಾಬರಿಯಿಂದ ಬಿತ್ತರಿಸಿದಳು "ಜಾರ್ಜ್! ನೀನು ಯಾವಾಗಲೂ ನಿರ್ಲಕ್ಷ್ಯ! ನಾನು ಜೋನನ್ನು ಸ್ಪಷ್ಟವಾಗಿ ಕಂಡೆ!"

"ಅದರಿಂದ ತೊಂದರೆ ಏನಿಲ್ಲ. ನಿನ್ನ ಮನಸ್ಸಿನ ಭ್ರಮೆ ಅಷ್ಟೆ. ಸುಮ್ಮನೆ ಮಲಗು. ನನಗೆ ನಿದ್ದೆ ಬರುತ್ತಿದೆ. ನಿಧಾನವಾಗಿ ಯೋಚಿಸೋಣ."

ಅವನ ಉದಾಸೀನ ಮತ್ತು ನಿದ್ದೆಗಳ ಹುಂಬತನಕ್ಕೆ ಲ್ಯೂಸಿ ನಿಜವಾಗಿಯೂ ಸಿಟ್ಟುಗೊಂಡಳು. ಆದರೇನು ? ಕೆಲವೇ ಕ್ಷಣಗಳಲ್ಲಿ ಅವನು ನಿದ್ದೆ ಹತ್ತಿ ಗೊರಕೆ ಹೊಡೆಯ ಹತ್ತಿದ. ಲ್ಯೂಸಿ ಅದೇ ಚಿಂತನೆಯಲ್ಲಿ ಮಲಗಿದರೆ ನಿದ್ದೆ ಬರಬೇಕೆ ? ತಲೆ ತುಂಬಾ ಅದೇ ಯೋಚನೆ.....

ಅಂಕಲ್ ಜೋ ಒಮ್ಮೆ ಹೇಳಿದ್ದ "ನೋಡು, ಲ್ಯೂಸಿ ನನ್ನ ಬದುಕನ್ನು ಈಗ ಎಲ್ಲರೂ ಮೆಚ್ಚಿಕೊಳ್ಳುತ್ತಾರೆ. ಸ್ವರ್ಗದಲ್ಲಿ ತಂದೆಯೂ ಮೆಚ್ಚಿಕೊಳ್ಳುತ್ತಾನೆಂಬ ಭರವಸೆ ನನಗುಂಟು. ಒಮ್ಮೆ ವಸ್ತುಗಳನ್ನು ಜೋಡಿಸಿಟ್ಟಿದ್ದರೂ ಅನಂತರ ಮರೆತಿರಬಹುದೆಂಬ ಅನುಮಾನದಿಂದ ಎಲ್ಲವನ್ನೂ ನೋಡಿ ಸರಿಯಾಗಿಲ್ಲದಿದ್ದರೆ ಮತ್ತೆ ಜೋಡಿಸುವೆ, ಎಲ್ಲವೂ ಓರಣವಾಗಿರುವಂತೆ !"

ಹಾ! ಆ ಮಾತುಗಳು ಕರ್ಣಪಟಲಗಳ ಮೇಲೆ ಮೊರೆಯತೊಡಗಿದುವು.

ಲ್ಯೂಸಿ ಯೋಚನಾಪರವಶಳಾದಳು. ಅಂಕಲ್ ಜೋ-ನ ಮೂರ್ತಿ ಮನದಲ್ಲಿ ನೆಲೆ ನಿಂತಿತು. ಅವನ ಪರಿಚಯ ಇಂದು ನಿನ್ನೆಯದಲ್ಲ. ಸುಮ್ಮನೆ ಯೋಚಿಸುತ್ತ ಮುಸುಗಿಟ್ಟು ಮಲಗಿದಳು ಲ್ಯೂಸಿ. ಮನಸ್ಸು ಅಂಕಲ್ ಜೋ-ನ ಸುತ್ತಮುತ್ತ ಸುಳಿಸುತ್ತುತಿತ್ತು. ಹಾ, ಎಂತಹ ವ್ಯಕ್ತಿತ್ವ ? ಇದ್ದರೆ ಹಾಗಿರಬೇಕು !

* * * *

ಮೇಜಿನ ಮೇಲಿದ್ದ ಅಂಕಲ್ ಜೋ-ನ ಚಿತ್ರಪಟವನ್ನು ತೆಗೆದು ಟಿ.ವಿ.ಯ ಮೇಲಿಟ್ಟು ಮೇಜಿನ ಮೇಲಿದ್ದ ಧೂಳನ್ನು ಝಾಡಿಸಿದಳು ಲ್ಯೂಸಿ. ಮೈಗೆ ಆಯಾಸವಾಗಿದ್ದುದರಿಂದ ಹೊರಗಡೆ ಹೋಗುವ ವಿಚಾರವನ್ನು ಬದಿಗಿಟ್ಟು ಮನೆಗೆಲಸದಲ್ಲೇ ತನ್ಮಯಳಾದಳು. ಜಾರ್ಜ ಗಾರ್ಟರ್ ಪುಸ್ತಕಾವಲೋಕನದಲ್ಲಿ ಮೈಮರೆತಿದ್ದ. ಟಿ.ವಿ.ಯ ಕಡೆಯೂ ಗಮನವಿಲ್ಲ. ನಿದ್ರೆಯ ಯೋಚನೆಯೂ ಇಲ್ಲ.

ಗಡಿಯಾರದ ಮುಳ್ಳು ಹತ್ತರ ಸಂಖ್ಯೆಯನ್ನು ದಾಟಿತು.

ತುಂಬ ಆಯಾಸಗೊಂಡಿದ್ದ ಲ್ಯೂಸಿ ಹಾಸಿಗೆ ಸೇರಿದಳು. ಯಾವ ಭ್ರಮಲೋಕದ ನಿದ್ದೆಯೋ ಆಕ್ಷಣವೇ ಆವರಿಸಿತು ನಯನದ್ವಯಗಳನ್ನು. ಕಣ್ಮುಚ್ಚಿ ಶಾಂತಶೀಲತೆಯಿಂದ ನಿದ್ರಿಸಿದಳು ಲ್ಯೂಸಿ ಗಾರ್ಟರ್.

“ಓ !.....ಲ್ಯೂಸೀ.....ಲ್ಯೂಸೀ !”

“ಯಾರದು ?”

“ನಿನ್ನ ಅಂಕಲ್ ಜೋ ! ನೀನು ಇಲ್ಲಿಗೆ ಬಂದುದು ಒಳ್ಳೆಯದಾಯಿತು. ನನ್ನ ನಂತರ ಈ ಮನೆ ದುರವಸ್ಥೆಗೆ ಬರುವುದು ಏನೇನೂ ಇಷ್ಟವಿರಲಿಲ್ಲ. ನನಗೆ ಇನ್ನು ನೀನು ಖಂಡಿತ ಸಮರ್ಥ ಆಡಳಿತಗಾತಿಯಾಗುತ್ತಿ ಎಂಬ ಭರವಸೆ ನನಗಿದೆ. ಇಂದು.....ಇಂದು ಚಿತ್ರಪಟ ಅಲ್ಲಿಂದ ತೆಗೆದದ್ದೇಕೆ ? ಅದು ಸರಿಯಲ್ಲ. Think twice my dear girl !”

ಆ ಗಾಢವಾದ ನಿದ್ದೆಯಲ್ಲಿ ಎಲ್ಲವೂ ಅಸ್ಪಷ್ಟ. ಬೆಳಗೆದ್ದು ಜ್ಞಾಪಿಸಿಕೊಂಡವಳೇ ಅಂಕಲ್ ಜೋ ಚಿತ್ರಪಟವನ್ನು ನೋಡಿದರೆ ಅದು ಪುನಃ ಮೇಜಿನ ಮೇಲೆ ಇದೆ !

ಅವಾಕ್ಕಾದಳು ಲ್ಯೂಸಿ ಗಾರ್ಟರ್.

* * * *

ಲ್ಯೂಸಿ ಗಾರ್ಟರ್ ಆ ಚಿತ್ರವನ್ನು ನೋಡಿಯೇ ನೋಡಿದಳು !

ಮೇಜಿನ ಮೇಲಿಂದ ತೆಗೆದು ಟಿ.ವಿ.ಯ ಮೇಲಿಟ್ಟದ್ದು ತಾನೇ. ತನಗದರ ನೆನಪು ಸುಸ್ಪಷ್ಟ. ಅವನಿದ್ದಾಗಲೂ ಆ ಚಿತ್ರ ಇದ್ದುದು ಮೇಜಿನ ಮೇಲೆಯೇ. ಅವನದನ್ನು ಒರಸಿ ಉಜ್ಜಿ ಹೊಚ್ಚ ಹೊಸದರಂತೆ ಶುಭ್ರವಾಗಿಟ್ಟಿದ್ದ. ತಾನು ಧೂಳು ಝಾಡಿಸುವ ಸಮಯದಲ್ಲಿ ಮರೆತು ಸ್ಥಳಾಂತರಿಸಿದ್ದು ಹೌದು. ಆದರೆ, ಅದರಿಂದ ಅವನಿಗೆ ಎಂತಹ ಕಾಳಜಿ ? ಬಹುಶಃ ಸ್ವರ್ಗದಲ್ಲಿಯೂ ಅವನು ಶಿಸ್ತು ಸಾಧಿಸಬಹುದು.....! ಆಲೋಚನೆಯ ಸುಳಿಯಲ್ಲಿ ಸಿಕ್ಕಿ ಮೈಮರೆತು ನಿಂತಿದ್ದಾಳೆ ಲ್ಯೂಸಿ.

ಅಷ್ಟರಲ್ಲಿ ಜಾರ್ಜ್ ಗಾರ್ಟರ್ ಹಾಸಿಗೆಯಿಂದ ಎದ್ದು ಬಂದ. ಮುಖದಲ್ಲಿ ಇನ್ನೂ ನಿದ್ದೆಯ ಮಂಪರ. ಮೈಕೈ ಮುರಿದು "ಏನು ನೋಡುತಿದ್ದಿ ಮೈ ಗರ್ಲ್ ?" ಎಂದ.

ಲ್ಯೂಸಿ ರಾತ್ರಿಯ ಅನುಭವವನ್ನು ತಿಳಿಸಿ "ನಿಜಕ್ಕೂ ಯೋಚಿಸಿದರೆ ನಿದ್ದೆಯ ಮಂಪರವೋ, ಕನಸೋ, ನನಸೋ ಒಂದೂ ತಿಳಿಯುತ್ತಿಲ್ಲ. ಈಗ ನೋಡಿದರೆ ನಾನು ಮರೆತು ಟಿ.ವಿ.ಯ ಮೇಲಿಟ್ಟಿದ್ದ ಫೋಟೋ ಮೇಜಿನ ಮೇಲೆಯೇ ಬಂದು ಕುಳಿತಿದೆ ! ಇದಕ್ಕೇನೆನ್ನೋಣ ?" ಎಂದಳು ಪರಮಾಶ್ಚರ್ಯಭರಿತಳಾಗಿ.

ಅವನು ಅಷ್ಟೇ ಸರಾಳವಾಗಿ ನುಡಿದ,

"ಸರಿ ; ನೀನೊಂದು ಪಾಠ ಕಲಿತಂತಾಯಿತು !"

ಆಗ ಅವಳಿಗೆ ಅನಿಸಿದ್ದೇನು ?

ಏನೊಂದೂ ಮಾತಾಡದೆ ನಿಂತ ಮಡದಿಯನ್ನು ನೋಡಿ, ಜಾರ್ಜ್ ಗಾರ್ಟರ್ ತಾನೇ ನುಡಿದ,

"ಈ ಲಂಡನ್ ನಗರದಲ್ಲಿ ಇಂತಹ ಭೂತಗಳಿಗೆ ಕೊರತೆಯೇ ಇಲ್ಲ. ಅದಕ್ಕಾಗಿ ನಾವು ತಲೆ ಕೆಡಿಸಿಕೊಳ್ಳಬೇಕಿಲ್ಲ. ಈಗೊಂದಿಷ್ಟು ಕಾಫಿ ನೀಡಿದರೆ ನಿನಗೆ ಪುಣ್ಯ ಬರುತ್ತೆ !"

"ಕಾಫಿ ಬೇಕಿದ್ದರೆ ನೀನೇ ಮಾಡಿಕೋ!" ಎಂದಳು ಲ್ಯಾಸಿ. ಕೋಪ-ತಿರಸ್ಕಾರಗಳ ಗಣಿಯಾಗಿ.

ಅವನು ಹಿಹ್ಹಿಹ್ಹೀ ಎಂದು ನಕ್ಕು ಶೌಚಾಲಯವನ್ನು ಹೊಕ್ಕ.

ಎದೆಯ ಹಕ್ಕಿ ಉಲಿಯಿತು God only knows the truth.



# ಭಾಗ್ಯಲಕ್ಷ್ಮಿ

Fourtune aids the brave....

ಅದೊಂದು ರವಿವಾರದ ಸುಸುಂದರ ದಿನ.

ರಸ್ತೆಯ ತುಂಬೆಲ್ಲಾ ಬಿಡುವಿನ ದಿನದ ಸಂಭ್ರಮವನ್ನು ಸಾರಿ ಹೇಳುವಂತೆ ಗದ್ದವೇ ಗದ್ದಲ.

ವಿವಿಧ ವಾಹನಗಳ ಸಂಚಾರಕ್ಕೆ ಎಣೆಯೇ ಇಲ್ಲ. ರಂಗುರಂಗಿನ ಜನ ಪ್ರವಾಹಕ್ಕೂ ಕೊರತೆಯಿಲ್ಲ. ಟೋಕಿಯೋ ನಗರದ ಒಂದು ಬೀದಿಯಲ್ಲಿ ನೋಡಂ ಹನಾಯಮಾಬಾಟಾ ವ್ಯಾಪಾರ ಮುಗಿಸಿದನಂತರ ಹಿಂದಿರುಗಿ ಮನೆಯ ಹಾದಿ ಹಿಡಿದಿದ್ದಾಳೆ. ಜನ ನಿಬಿಡವಾದ ರಸ್ತೆಯಲ್ಲಿ ಸರಸರ ನಡಿಗೆ ಅನೇಕರಿಗೆ ಕಷ್ಟವೇ. ಆಹಾರ ಸಾಮಗ್ರಿಗಳಿಂದ ತುಂಬಿದ ಕೈಬುಟ್ಟಿ ಭಾರವಾಗಿದ್ದುದರಿಂದ ಕೈಯಿಂದ ಕೈಗೆ ಬದಲಾಗುತಿತ್ತು. ಅರವತ್ತರ ಹರೆಯದಲ್ಲೂ ಉತ್ಸಾಹ-ಚಟುವಟಿಕೆಗಳ ಬೀಡು ಶರೀರ ಸಂಪತ್ತಿ. ಹರೆಯದವರನ್ನೂ ಮೀರಿಸುವಂತಹ ಮುನ್ನಡೆ ಕಾಲುಗಳಲ್ಲಿ. ಜನ-ವಾಹನಗಳ ಅಡೆತಡೆಗಳನ್ನು ಲಕ್ಷಿಸುವಳೇ ಅಲ್ಲ ಹನಾಯಮಾಬಾಟಾ, ಅಂತಲೇ ನಡಿಗೆ ಸರಾಗ.

ಮುಂದೆ ಸ್ವಲ್ಪದೂರ ನಡೆದಿದ್ದಳೇನೋ....ಮೂರನೆಯ ಅಡ್ಡರಸ್ತೆ ಕೈಬೀಸಿ ಕರೆಯಿತು. ಅದೇ ತನ್ನನ್ನು ಮನೆಗೆ ಮುಟ್ಟಿಸುವ ಅಸುಂದರ ಪಥ.

ಮೆಯಿನ್ ರಸ್ತೆಯಲ್ಲೇ ಭಾರತೀಯನಾದ ರವಿವರ್ಮ ಎದುರಾದ. ವಿದ್ಯಾ ಇಲಾಖೆಯಲ್ಲಿ ಕೆಲಸಮಾಡುತ್ತಿರುವ ಹಳೆಯ ಗೆಳೆಯ. ಪರಸ್ಪರ

ದರ್ಶನಲಾಭದಿಂದ ಮುಖಬಿಂಬಗಳು ಅರಳಿದ ಮಂದಾರದಂತೆ ಪ್ರಸನ್ನ ವಾದುವು. ಅವಳು ಹುಬ್ಬೇರಿಸಿ "ಹಲೋ.....!" ಎಂದಳು. ರವಿವರ್ಮ ಆತ್ಮೀಯತೆಯಿಂದ ವಂದಿಸಿದ "ನಮಸ್ಕಾರ ಮೇಡಂ! ಭಾನುವಾರದ ಬಿಡುವು. ಬಹಳ ವ್ಯಾಪಾರ ಮಾಡಿದ್ದೀರಿ?"

ಪ್ರತಿವಂದಿಸಿದ ಮೇಡಂ ಹನಾಯಮಾಬಾಟಾ ಉತ್ತರಿಸಿದಳು "ಓ ನಿಮಗೆ ತಿಳಿಯದೇನೋ.....ನಾನು ಶಾಲೆಯಿಂದ ನಿವೃತ್ತಿ ಹೊಂದಿ ಆರು ತಿಂಗಳಾಯ್ತು."

"ಹೌದೇ ? ನನಗದು ತಿಳಿದಿರಲಿಲ್ಲ ಮೇಡಂ!"

"ವಿಶ್ರಾಂತ ಜೀವನ ಸಾಕೆನಿಸಿದೆ. ಇನ್ನೇನಾದರೂ ಮಾಡ ಬೇಕೆಂದಿರುವೆ. ಹೀಗೇ ಉಳಿದರೆ ಹಣ ಸ್ಥಗಿತ ಮಾತ್ರವಲ್ಲ. ಮನಃ ಬುದ್ಧಿಗಳೂ ಸ್ಥಗಿತ ಗೊಳ್ಳುವುದು ಸತ್ಯ."

"ಹಾ! ಹಾಗಾಗಬಾರದು! ಒಂದು ಟುಟೋರಿಯಲ್ ಕ್ಲಾಸ್ ತೆರೆದುಬಿಡಿ."

"ನನ್ನ ಡಿಯರ್ ಹಸ್ಬೆಂಡ್ ಹೇಳುವುದೂ ಅದೇ. ನನ್ನ ಬಯ ಕೆಯೂ ಅದೇ. ನಿಮ್ಮ ಸಲಹೆಯೂ ಅದೇ. ನೋಡಿ! ಹೇಗೆ ಗ್ರಹ ಗ್ರತಿಗಳು ಕೂಡಿಬರುತ್ತವೆ?"

ಆನಂದಮೋದದಿಂದ ಅರಳು ಕಣ್ಣುಗಳು ಮಿನುಗಿದವು. ಆ ಮುಹೂರ್ತದಲ್ಲಿ ಎಲ್ಲೋ ಪರಿತ್ಯಕ್ತ ಆಸೆಯ ಬೆಳಕು ಬಂದು ಕ್ಷಣಕಾಲ ಕೂಡಿ ಮಾಯವಾಯಿತು.

"ನೀವು ಸ್ಕೂಲ್ ನಡೆಸುವುದಾದರೆ ನನ್ನ ಸಂಪೂರ್ಣ ಸಹಕಾರ ಉಂಟೇಉಂಟು!"

"ಅಂದರೆ..........?" ದನಿ ಎದೆಯಾಳದಿಂದ ಹೊರಬಿತ್ತು. ಮನದಲ್ಲಿ ಇಚ್ಛೆಯನ್ನು ದ್ವಿಗುಣಿತ ಗೊಳಿಸುವಂತಹ ಆಸಕ್ತಿ. ನೆಟ್ಟ ನೋಟದಿಂದ ನೋಡಿದಳು ಅವಳು.

"ಒಂದೆರಡು ತಿಂಗಳಲ್ಲಿ ನಾನೂ ನಿವೃತ್ತಿ ಹೊಂದುವವನೇ!"

"ಹಾಗೋ....?" ತಲೆದೂಗಿದಳು ಮೇಡಂ ಹನಾಯ ಮಾಬಾಟಾ.

" ಕೆಲಸವಿಲ್ಲದೆ ಕಾಲಹರಣ ಕಷ್ಟವಲ್ಲವೇ ಮೇಡಂ ?"

" ಖಂಡಿತ! ಆಗೆಲ್ಲಾ ಮಕ್ಕಳು ಕೂಗಾಡುವಾಗ ಈ ಹಗರಣ ಎಮ್ಮೆ ಮುಗಿದರೆ ಸಾಕು.....ಎಂದು ಎಷ್ಟೋ ಬಾರಿ ಯೋಚಿಸಿದ್ದುಂಟು. ಈಗ ಹಾಗೆನಿಸುವುದಿಲ್ಲ. ವೈಚಾರಿಕ ಭಾವನಾಭಂಗಿಯಲ್ಲಿ ನುಡಿದಳು ಮೇಡಂ ಹನಾಯಮಾಬಾಟಾ. ಆ ಗಳಿಗೆಯಲ್ಲಿ ಆ ಶಾಲೆ, ಆ ಮಕ್ಕಳು, ಆ ಸಹ ಕೆಲಸಗಾರರು ಮನೋಭಿತ್ತಿಯಮೇಲೆ ಸುಳಿದಳಿದರು. "ಹ್! ಎಂತಹ ಸುಸುಂದರ ಕೂಟ!" ಎಂದು ಕೊಂಡಳು ಅವಳು.

ಇಬ್ಬರೂ ಪರಸ್ಪರ ಮುಗುಳ್ನಗೆಯೊಡನೆ ವಿದಾಯ ಹೇಳಿ ಬೀಳ್ಕೊಂಡು ಹೊರಟರು ತಮ್ಮತಮ್ಮ ಹಾದಿ ಹಿಡಿದು. ಮೇಡಂ ಮುಂದೆ ಸ್ವಲ್ಪದೂರ ನಡೆದಿದ್ದಳೇನೋ.....ಕೈಬುಟ್ಟಿಯ ಹಿಡಿ ಸರಕ್ಕನೆ ಜಾರಿ ಕೆಲವು ಸಾಮುಗ್ರಿಗಳು ಕೆಳಗಡೆ ಚೆಲ್ಲಿದುವು.

" ಓ ಮೈಗಾಡ್ ! ಎಂದು ಉದ್ಗಾರ ತೆಗೆದ ಅವಳು ಬುಟ್ಟಿಯನ್ನು ಕೆಳಗಿಟ್ಟು ಸಾಮುಗ್ರಿಗಳನ್ನು ತುಂಬುವಾಗ ರಸ್ತೆಯ ಬದಿಯಲ್ಲಿ ಬಿದ್ದಿದ್ದ ಬೆಳ್ಳಿಯ ನಾಣ್ಯವೊಂದು ದೃಷ್ಟಿಗೆ ಬಿತ್ತು. ಅದನ್ನು ಎತ್ತಿ ನೋಡಿದರೆ ಒಂದು ಕಡೆ ಲಕ್ಷ್ಮಿಯ ಚಿತ್ರ. ಇನ್ನೊಂದು ಕಡೆ ರೂಪಾಯಿಯ ಮೊಹರು. ಅದನ್ನು ನೋಡಿದೊಡನೆಯೇ ಮನಸ್ಸಿಗೆ ಏನೋ ಒಂದು ಬಗೆಯ ಅನಿರ್ವಚನೀಯವಾದ ಆನಂದ ಮೂಡಿ ಹೃದಯ ಬಿರಿಯು ವಂತಾಯಿತು.

ಅದನ್ನು ಅಂಗೈಯಲಿಟ್ಟುಕೊಂಡು ಹಿಂದೆ ಮುಂದೆ ತಿರುಗಿಸಿ ನೋಡಿದಳು. ಅದು ಬೆಳ್ಳಿಯದು ಎಂಬ ಅರಿವು ಮೂಡಿದರೂ ಉಪ ಯೋಗ ತಿಳಿಯದು. ಏನೇ ಇರಲಿ, ಸುಂದರ ನಾಣ್ಯ. ಸುಂದರ ಬಾಳಿ ಗಾಗಿಯೇ ದೊರಕಿರಬಹುದು ಎಂಬ ಭಾವ ಮನದಲ್ಲಿ. ಅವಳದನ್ನು ಕಿಸೆಯಲ್ಲಿಟ್ಟು ಮನೆ ಸೇರಿದಳು. ಹೃನ್ಮನಗಳಲ್ಲಿ ಏನೋ ಒಂದು ಬಗೆಯ ಮಧುರಭಾವನೆಯ ಲಹರಿ ಮೃದು ಮಂದವಾಗಿ ಹರಿದಾಡುತ್ತಿದೆ. ಯೋಚಿಸಿದರೂ ಅರ್ಥವಾಗದ ಆನಂದಮಯ ಸಮಯ. ಮರುಕ್ಷಣದಲ್ಲೇ ಈವೊಂದು ಸಣ್ಣ ನಾಣ್ಯಕ್ಕೆ ಏಕೆ ಮರುಳಾಗುತ್ತಿದ್ದೇನೆ ಎಂಬ ಪ್ರಶ್ನೆಯೂ ಏಳುತ್ತದೆ. ತನ್ನಷ್ಟಕ್ಕೇ ನಕ್ಕುಬಿಡುತ್ತಾಳೆ.

ವರಾಂಡದಲ್ಲಿ ಪತ್ರಿಕಾವಲೋಕನದಲ್ಲಿ ತನ್ಮಯನಾಗಿದ್ದ ಪತಿ ಹಿರೊಹಿಟೊ ಮಡದಿ ಸಮೀಪಿಸುತ್ತಲೂ ಅಂದ "ಒಬ್ಬಳೇ ಹೋಗಿದ್ದಿ. ನಾನು ಬರುವವರೆಗೂ ಕಾಯಬಹುದಾಗಿತ್ತಲ್ಲ ಶುಭೆ! ಬುಟ್ಟಿ ಭಾರವಾಗಿದ್ದಂತಿದೆ?"

ಹೌದು. ತುಂಬ ಭಾರವೆ. ಆಗಾಗ್ಗೆ ಕೈಬದಲಿಸಿಕೊಳ್ಳಬೇಕಾಯ್ತು. ಕೆಲವು ಸಾಮಾನಿನ ಅಗತ್ಯಬಿದ್ದುದರಿಂದ ಹೊರಟೆ. ಅಂದಹಾಗೆ, ನನಗೆ ದಾರಿಯಲ್ಲಿ ಒಂದು ನಾಣ್ಯ ಸಿಕ್ಕಿತು. ಇದು ಎಲ್ಲಿಯದು? ನಿನಗೇನಾದರೂ ಗೊತ್ತೇ ನೋಡು?"

ಅವಳು ನಾಣ್ಯವನ್ನು ಕಿಸೆಯಿಂದ ತೆಗೆದು ಅವನ ಕೈಗಿತ್ತಳು. ಅವನು ಅದನ್ನು ತೆಗೆದು ಹಿಂದೆಮುಂದೆ ತಿರುಗಿಸಿ ನೋಡಿ ನುಡಿದ "ಇದು ಭಾರತೀಯ ನಾಣ್ಯ. ಬಹುಶಃ ಯಾರೋ ಕಳೆದುಕೊಂಡಿರಬೇಕು. ಸಣ್ಣ ನಾಣ್ಯ. ಹೆಚ್ಚು ಬೆಲೆಯುಳ್ಳುದೇನೂ ಅಲ್ಲ."

"ಡಾರ್ಲಿಂಗ್! ಏನಾದರೂ ಇರಲಿ, ಅದನ್ನು ಹೆಕ್ಕಿನೋಡಿದೊಡನೆ 'ಶುಭ' ಎನಿಸಿತು. ಅದರಲ್ಲಿ ದೇವತೆಯ ಚಿತ್ರವಿದೆ. ಬಹುಶಃ ಅದಕ್ಕೇ ಹಾಗೆನಿಸಿತೇನೋ....."

ಆ ಮುಹೂರ್ತದಲ್ಲಿ ಮುಖಕಣ್ಣುಗಳಲ್ಲಿ ಅಸೆಯ ಬೆಳಕು ಸ್ಫುರಿಸಿತು. ಅವಳು ಪ್ರಸನ್ನವದನೆಯಾದಳು.

ಅವನು ಹಾಸ್ಯಪ್ರಧಾನವಾಗಿ ಪಕಪಕನೆ ನಕ್ಕುಬಿಟ್ಟ.

ಅವಳು ಮುಂದುವರಿದಳು "ನೀನು ಲಘುವಾಗಿ ಕಾಣಬೇಡ. ದೇವತೆಯ ಅನುಗ್ರಹವಿಲ್ಲದೆ ಇದು ದೊರಕುವುದುಂಟೆ? ದೇವತೆ ದಕ್ಕುವುದು ಒಳ್ಳೆಯದಕ್ಕಾಗಿ!"

"ಆಗಲಿ, ಶುಭೆ! Wish you good luck!"

ಇಬ್ಬರ ಮುಖದಲ್ಲೂ ನಗುವಿನಲಹರಿ ಉಕ್ಕಿಹರಿಯಿತು.

ಆತ್ಮೀಯತೆಯ ಮಧ್ಯೆ ಹೊತ್ತು ಸಾನಂದದಿಂದ ಉರುಳಿತು; ಹೃದಯಹಾರೀ ಚಿಂತನಾವೇಶವನ್ನು ಮೀರಿ.

* * * *

ಹನಾಯಮಾಬಾಟಾ ನಾಣ್ಯವನ್ನು ಬೀರುವಿನಲ್ಲಿಡಲು ಬಯಸಿದಳಾದರೂ ಕಿಸೆಯಿಂದ ಕದಲಿಸಲು ಮನಸ್ಸಾಗಲಿಲ್ಲ. ಪದ್ಮಪೀಠಸ್ಥಳಾದ ಲಕ್ಷ್ಮಿಯಲ್ಲಿ ಅಭೂತಗೌರವ ಭಾವನೆಮೂಡಿದುದರಿಂದ ಅದು ತನ್ನ ಬಳಿಯೇ ಇರಲಿ ಎಂಬ ಅಭಿಲಾಷೆ. ನಾಣ್ಯಕ್ಕೆ ಮುತ್ತಿಟ್ಟು ಪುನಃ ಕಿಸೆಯಲ್ಲೇ ಇರಿಸಿದಳು. ಪದ್ಮ ಪೀಠಸ್ಥೆ, ಕಿರೀಟ ಕುಂಡಲ ಧಾರಿಣಿ, ನೈದಿಲಿ ಹಸ್ತೆ. ನಿಜಕ್ಕೂ ಅನ್ಯಾದೃಶ ಭಂಗಿ ಎಂದುಕೊಂಡಳು ಅವಳು. ಏನೋ ಒಂದು ಬಗೆಯ-ಯೋಚಿಸಿದರೂ ಅರ್ಥವಾಗದ ಅಪೂರ್ವ ಆಪ್ಯಾಯಮಾನವಾದ ಮನಃಕಲ್ಪನೆ.

ಮುಸ್ಸಂಜೆ ಕವಿಯುವ ಮುನ್ನ ಶ್ರೀಮತಿ ವಿಮಲ ರಾನಡೆ ಆಗಮಿಸಿದಳು. ತನ್ನ ವಿದ್ಯಾರ್ಥಿನಿಯರ ತಾಯಿಯಾದ ಅವಳನ್ನು ಸಂತೋಷದಿಂದ ಸ್ವಾಗತಿಸಿದಳು ಹನಾಯಮಾಬಾಟಾ " Wel-come my dear Vimala ! ಶಾಲೆ ಬಿಟ್ಟನಂತರ ನೀವೆಲ್ಲಾ ನನ್ನನ್ನು ಮರೆತೇ ಬಿಟ್ಟಿರಿ ಎಂದುಕೊಂಡಿದ್ದೆ ! ಪರವಾಯಿಲ್ಲ. ನೀನಲ್ಲದೆ ಎಷ್ಟೋ ಮಂದಿ ಬಂದು ಹೋಗಿದ್ದಾರೆ. ನಿಮ್ಮ ಆತ್ಮೀಯ ಅನುಬಂಧಕ್ಕಾಗಿ ತುಂಬ ವಂದನೆಗಳು.

" ಹೇಗೆ ಮರೆತೇವು ಮೇಡಂ ? ನೀನು ಒಳ್ಳೆಯ ಉಪಾಧ್ಯಾಯಿನಿ ! ನಿನ್ನಿಂದ ನಮ್ಮ ಮಕ್ಕಳು ವಿದ್ಯೆ ಕಲಿತು ಧನ್ಯರಾಗಿದ್ದಾರೆ. ಉಪಾಧ್ಯಾಯಿನಿಯನ್ನು ಮರೆಯುವುದುಂಟೆ ?"

ಆ ಮಾತು ಅಂತರಾಳದಲ್ಲಿ ಕೈಯಾಡಿಸಿತು. ಹನಾಯಮಾಬಾಟಾ ಆನಂದತುಂದಿಲಳಾಗಿ ನುಡಿದಳು "ನೋಡು, ನಾನು ಉದ್ಯೋಗ ಹಿಡಿದಿದ್ದು ಉದರ ಪೋಷಣೆಗೆ ಮಾತ್ರವಲ್ಲ. ನಮ್ಮ ದೇಶ, ನಮ್ಮ ಜನ, ನಮ್ಮ ಮಕ್ಕಳು ಎಂಬ ಅಭಿಮಾನ ಸದಾ ಶ್ರಮ ಜೀವನದ ಶ್ರಮಿಕವೃತ್ತಿಗೆ ನನ್ನನ್ನು ತಳ್ಳುತ್ತಲೇ ಇರುತ್ತದೆ. ಈಗಲೂ ಅಷ್ಟೆ. ನಾನು ವಿಶ್ರಾಂತಿ ಬಯಸುವಳೇ ಅಲ್ಲ. ಯಾರಾದರೂ ಬಡಮಕ್ಕಳು ಪಾಠಕ್ಕಾಗಿ ಬರುತ್ತಿರುತ್ತಾರೆ. ಅವರಿಗೆ ಪಾಠ ಹೇಳುವುದರಲ್ಲಿ ಆತ್ಮಸಂತೃಪ್ತಿ ಬರುತ್ತದೆ. ಮುಂದೆ ಒಂದು ಟುಟೋರಿಯಲ್ ಸ್ಕೂಲ್ ತೆರೆದರೆ ಒಳ್ಳೆಯದೇನೋ ಎಂಬ ಯೋಚನೆಯಿದೆ. ಮುಖ್ಯವಾಗಿ ಸಹಾಯ ಹಸ್ತಗಳು ಬೇಕು.

"ನೀನೊಮ್ಮೆ ಕೈಹಾಕಿದೆ ಎಂದರೆ ಸಹಾಯ ಹಸ್ತಗಳು ತಾನಾಗಿಯೆ ಕೂಡಿಬರುತ್ತವೆ. ದೇವರ ಮೇಲೆ ಭಾರ ಹಾಕು ಮೇಡಂ!"

"ವಿದ್ಯಾರ್ಥಿಗಳಲ್ಲಿ ಅಶಿಸ್ತು-ಅಜ್ಞಾನ ಕೆಲವೊಮ್ಮೆ ಬೇಸರ ತರಿಸುತ್ತೆ ಆದರೂ, ನಾವು ನಮ್ಮ ಧ್ಯೇಯೋದ್ದೇಶಗಳನ್ನು ಬಿಟ್ಟುಕೊಡಬಾರದ ವಿಮಲಾ!"

"ಅದು ನಿಜ ಮೇಡಂ. ಸಿನಿಮಾಯ ಚಿತ್ರ ಮಾಧ್ಯಮಗಳಿಂದ ಕುಸಾಹಿತ್ಯ ಮಾಧ್ಯಮಗಳಿಂದ ಮತ್ತು ಕಾಮಿಕ್ ಚಿತ್ರ ವಾರಾಯಿಗಳಿಂ ಮಕ್ಕಳು ಅಡ್ಡದಾರಿ ಹಿಡಿಯಲು ಬಹುತೇಕ ಕಾರಣ ಎಂದರೆ ತಪ್ಪಲ್ಲ ವಿಜ್ಞಾನ ಮಂಡಳಿ ಹೊಲಸು ಚಿತ್ರಗಳಿಗೆ ಕತ್ತರಿ ಪ್ರಯೋಗ ಮಾಡ ದಿದ್ದರೆ ಎಂದಿಗೂ ಹೀಗೆಯೇ ಎಂದೇನು. ಕೀಳು ನಡವಳಿಕೆ, ಹೊಡ ದಾಟ, ಕುಸ್ತಿ, ಮೋಸ ಮುಂತಾದ ಹೀನ ಪ್ರವೃತ್ತಿಯ ಚಿತ್ರಗಳನ್ನು ಟಿ.ವಿ. ಯ ಮೂಲಕ ದಿನದಿನವೂ ಮನೆಯಲ್ಲೇ ನೋಡುತ್ತಾರೆ ಮಕ್ಕಳು. ಕಾಮಿಕ್ಸ್ ಚಿತ್ರಗಳೂ ಅಷ್ಟೆ. ವಕ್ರಭಾಷೆ ವಕ್ರ ನಡವಳಿಕೆಗಳಿಂದ ತುಂಬಿರುತ್ತವೆ. ಸಣ್ಣ ಮಗುವಿನಿಂದಲೂ ಇಂತಹ ಹೀನ ದೃಶ್ಯಗಳನ್ನು ನೋಡುವುದರಿಂದ ಮಕ್ಕಳ ಮನಸ್ಸು ಕೆಡುತ್ತದೆ ಎಂದರೆ ತಪ್ಪಾಗ ಲಾರದು.....ಇದು ಇಂದಿನ ಪ್ರಗತಿಯ ಲಕ್ಷಣ."

"ಇದನ್ನೆಲ್ಲಾ ಶಿಕ್ಷಣವೇತ್ತರು ಗಮನಿಸದಿರುವುದು ವಿಷಾದಕರ."

"ವಿಜ್ಞಾನ ಜಗತ್ತು ವಿಜ್ಞಾನ ವಿಸ್ಮಯಗಳಿಂದ ಕೂಡಿರುವಾಗ ವಿಜ್ಞಾನವೇತ್ತರುಗಳ ಕಣ್ಮುಂದೆ ಬೆಳೆಯುತ್ತಿರುವ ಕುಸಾಹಿತ್ಯದ ವಿಜೃಂಭಣೆ ಸಾಮಾನ್ಯವಲ್ಲ. ನಿರ್ಲಕ್ಷ್ಯಕ್ಕೂ ಒಂದು ಮಿತಿಯಿರಬೇಕು. ನೆರಳು ಬೆಳಕುಗಳ ಜೊತೆಗೆ ಇದು."

"ವಿದ್ಯಾವಂತರೂ ಅವಿದ್ಯಾವಂತರೂ ಕಣ್ಣು ಕಟ್ಟಿದ ಕುದುರೆಗಳಂತೆ ಒಂದೇ ನೇರಕ್ಕೆ ಓಡುತಿರುವುದನ್ನು ನಾವು ಅಂದಿಂದಿಗೂ ನೋಡುತ್ತಲೇ ಇದ್ದೇವೆ!"

"What a shame !',

ವಿಮಲ ರಾನಡೆ ನಗುತ್ತ ನುಡಿದಳು "ನಾಗರಿಕ ಪ್ರಜ್ಞೆ ಎಡವಿ ಬೀಳುವವರೆಗೆ ಎಚ್ಚತ್ತು ಕೊಳ್ಳಲಾರದು."

"ಅದರಿಂದಲೇ ನಾನು ಇಷ್ಟು ದಿನ ವಿಶ್ರಾಂತ ಜೀವನ ನಡೆಸಲು ಕಾರಣ. ಹತ್ತಿರದಲ್ಲಿ ಬಿಲ್ಡಿಂಗ್ ಸಿಕ್ಕಿದರೆ ಟುಟೋರಿಯಲ್ ಕ್ಲಾಸ್ ನಡೆಸುವೆ. ಮುಖ್ಯವಾಗಿ ಕೈತುಂಬ ಹಣಬೇಕು."

"Wish you good luck!"

ಮೇಡಂ ಹಾಸ್ಯ ಪ್ರಧಾನವಾಗಿ ಖೊಳ್ಳನೆ ನಕ್ಕು ನುಡಿದಳು "ನಾನಿನ್ನೂ ಶುರು ಮಾಡಲಿಲ್ಲ ..... ಆಗಲೇ Good luck!" ಆ ಮುಹೂರ್ತದಲ್ಲಿ ಸ್ನೇಹಭಾವವನ್ನು ತುಳುಕಿಸುವಂತೆ ಆನಂದ ವಿಸ್ತೃತ ವಾದುವು ನಯನದ್ವಯುಗಳು.

"ಇರಲಿ, ಶುಭ ಕೋರುವುದು ಒಳ್ಳೆಯದೇ!"

"ಸಂತೋಷ! ಓ.....! ಅಂದಹಾಗೆ ನಿನ್ನೆ ಸಾಯಂಕಾಲ ನನಗೊಂದು ಭಾರತೀಯ ನಾಣ್ಯ ದೊರಕಿದೆ. ಬಹುಶಃ ಅದೇನೆಂಬುದು ನಿನಗೆ ಗೊತ್ತಿರಲೇ ಬೇಕು, ನೋಡಿ ಹೇಳು."

ಹನಾಯುವಮಾಬಾಟಾ ಕಿಸೆಯಿಂದ ನಾಣ್ಯವನ್ನು ಹೊರ ತೆಗೆದು ತೋರಿದಳು.

"Good! ಲಕ್ಷ್ಮಿ ನಿನ್ನ ಕಿಸೆ ಸೇರಿದ್ದಾಳೆ! ಲಕ್ಷ್ಮಿ ಎಂದರೆ ಐಶ್ವರ್ಯ ದೇವತೆ!"

"ಹೌದೇ.....?" ಹುಬ್ಬೇರಿಸಿದಳು ಅವಳು.

"ಲಕ್ಷ್ಮಿ ಅಂದರೆ ಸಾಮಾನ್ಯವಲ್ಲ. ನೀನು ಪುಣ್ಯವಂತೆ!"

ಆ ಮಾತಿನಿಂದ ಪುಳಕಿತಳಾದ ಹನಾಯುವಮಾಬಾಟಾ ಹುಬ್ಬೇರಿಸಿ ನುಡಿದಳು "ಅದು ನನಗೆ ದೊರೆತಾಗಲೇ ಶುಭ ಕಲ್ಪನೆಯಾಗಿತ್ತು!"

"ಯಾರಿಗೆ ಗೊತ್ತು ಇದ್ದರೂ ಇರಬಹುದು!"

ಇಬ್ಬರ ಮುಖದಲ್ಲೂ ಆನಂದಭರಿತ ಮುಗುಳು ನಗೆ ಅರಳಿತು.

* * * *

ಹನಾಯುವಮಾಬಾಟಾ-ಳಿಗೆ ನಾಣ್ಯವನ್ನು ಕಿಸೆಯಲ್ಲಿಟ್ಟುಕೊಳ್ಳುವುದರಿಂದ ಕಳೆದುಹೋದೀತೇನೋ ಎಂಬ ಯೋಚನೆ ಬಂತು. ಕೂಡಲೇ ಒಂದು ಚಿಕ್ಕ ರೇಶಿಮೆಯ ಚೀಲಕ್ಕೆ ಉದ್ದದಾರ ಸೇರಿಸಿ ನಾಣ್ಯವನ್ನಿಟ್ಟು

ಕತ್ತಿನಲ್ಲಿ ಕೊರಳಹಾರವಾಗಿ ಧರಿಸಿದಳು. ಜಾಕೆಟ್ಟಿನ ಒಳಗೆ ಇರ
ಅದು ಸುರಕ್ಷಿತ. ಅದರಿಂದ ಯಜಮಾನಿಗೂ ಸಮಾಧಾನ-ಸಂತೋಷ.

ಚಂದನರಾಗದ ಪಟ್ಟುಡೆಯುಟ್ಟಿದ್ದಾಳೆ ಸಂಜೆವೆಣ್ಣು.

ಸಾಯಂ ಸೊಂಪು ಎಲ್ಲೆಲ್ಲೂ ತುಂಬಿ ಹರಡಿತ್ತು.

ಹಿರೊಹಿಟೊ ಮನೆಗೆ ಬಂದಾಗ ಮಡದಿಯೆಂದಳು "ನೋಡ
ನನಗೆ ನಾಣ್ಯ ದೊರೆತ ಮೇಲೆ ಮನಸ್ಸಿಗೆ ಏನೋ ಒಂದು ನೆಮ್ಮದಿ
ಇನ್ನೇನೋ ಒಂದು ಬಗೆಯ ಹಿತ. ಹೇಗೆ ಎಂದು ಕೇಳಿದರೆ ಹೇಳಲಾರೆ
ಅಂತೂ ಅಪೂರ್ವ ನೆಮ್ಮದಿ.

"ಇರಲಿ, ಬಿಡು. ಸಂತೋಷ ಬಂದರೆ ಯಾರಿಗೆ ಬೇಡ ಡಾರ್ಲಿಂಗ್?

"ಹೌದು.....ಅದೇ ಆನಂದ !"

"ಈಗ ನಾನಿಷ್ಟು ಬಜಾರಿಗೆ ಹೋಗಬೇಕಾಗಿದೆ. ನೀನೂ ಬರುತ್ತಿ
ಯಷ್ಟೆ ?"

"ಆಗಲಿ, ಎರಡು ನಿಮಿಷದಲ್ಲಿ ಅಣಿಯಾಗುವೆ."

ಮಡದಿ ತನ್ನ ಕೆಲಸದಲ್ಲಿ ಮನವಿಟ್ಟಳು. ಅವನು ಮುಖಮಜ್ಜ
ಮಾಡಿ ಚಹ ತಯಾರಿಸಿದ. ಇಬ್ಬರೂ ತಿಂಡಿತಿನಿಸುಗಳೊಂದಿಗೆ ಒಡ
ಹಸಿವೆ ತೀರಿಸಿಕೊಂಡರು. ಸಂಜೆಯ ಉಡುಪು ಧರಿಸಿ ಹೊರಹೊರಡುತ್ತ
ಹಾಸ್ಯ ಪ್ರಧಾನವಾಗಿ ನುಡಿದ ಹಿರೊಹಿಟೊ.

"ನಿನ್ನ ನಾಣ್ಯ ಭದ್ರವಾಗಿಟ್ಟಿದ್ದೀಯಷ್ಟೆ ?"

"ಇಗೋ, ಈ ಚೀಲದಲ್ಲಿ !"

ಜಾಕೆಟ್ಟಿನಡಿಯಿದ್ದ ಚೀಲವನ್ನು ಹೊರತೆಗೆದು ತೋರಿದಳು ಅವಳು
ಇಬ್ಬರ ಮುಖದಲ್ಲೂ ನಗೆಯ ಗುಲ್ಲು ಮೊಳಗಿತು. ಹಿರೊಹಿಟೊ ಕ
ಬುಟ್ಟಿಯೊಡನೆ ಮೆಟ್ಟಿಲಿಳಿದ.

ಹನಾಯುಮಾಬಾಟಾ ಮನೆಗೆ ಬೀಗ ಹಾಕಿದಳು. ಇಬ್ಬರೂ ಕೈಕ
ಹಿಡಿದು ನಡೆದರು, ರಸ್ತೆಯ ವಾಮಾಂಗದ ಕಾಲ್ಪಥದ ಮೇಲೆ. ಅಲ್ಲಿಂ
ಸೂಪರ್ ಮಾರ್ಕೆಟ್ ಅಂತಹ ದೂರವೇನೂ ಅಲ್ಲ. ವ್ಯಾಪಾರ ಒಮ್ಮ

ದಿಂದ ನಡೆಯಿತು.

*   *   *   *

ಹನಾಯುವರಾಜಾಟಾ ಒಳಗಣ ಕೆಲಸ ಮುಗಿಸಿ ಹೊರಬಂದಾಗಲೇ ರವಿವರ್ಮ ಆಗಮಿಸಿದ. ಪರಸ್ಪರ ಸಾಯಂ ವಂದನೆಗಳ ವಿನಿಯೋಗವಾದ ನಂತರ ರವಿವರ್ಮ ಕೇಳಿದ, ತುಂಬ ಕೆಲಸದಲ್ಲಿದ್ದಿರಾ ? ನನ್ನ ಆಗಮನ ದಿಂದ ತೊಂದರೆಯಾಯಿತೇ ?"

"ಅಂತಹದೇನಿಲ್ಲ, ಬನ್ನಿ. ಎಲ್ಲ ಕೆಲಸ ಮುಗಿದಿದೆ."

ಪರಸ್ಪರ ಉಭಯ ಕುಶಲೋಪರಿಯಾದ ನಂತರ ರವಿವರ್ಮ ನುಡಿದ ನಿಮಗಾಗಿ ನಾನು ಹಲವಾರು ಮನೆಗಳ ಮೆಟ್ಟಲು ಹತ್ತಿ ಇಳಿದೆ. ಯಾವುದೂ ಸಮಾಧಾನ ತರಲಿಲ್ಲ. ಕೊನೆಗೆ ಇದೇ ಮುಂದಿನ ಬೀದಿಯಲ್ಲಿ ಒಂದು ದೊಡ್ಡ ಮನೆಯಿದೆ. ಅದರಲ್ಲಿ ಬಲಭಾಗದಲ್ಲಿ ಎರಡು ದೊಡ್ಡ ಕೊಠಡಿಗಳು ಬಾಡಿಗೆಗೆ ಸಿಕ್ಕಲಿವೆ. ಪ್ರತ್ಯೇಕವಾದ ಬಾಗಿಲೂ ಇದೆಯಾದ್ದ ರಿಂದ ನನ್ನ ಮನವೊಪ್ಪಿತು. ನೀವೇನಾದರೂ ಟುಟೋರಿಯಲ್ ಕ್ಲಾಸ್ ತೆರೆಯುವುದಾದರೆ ನಿಮಗೆ ಹತ್ತಿರವಿರುವುದರಿಂದ ಹಿಡಿಯುವುದು ಅನುಕೂಲ."

ಗೆಳೆಯನ ಕಾರ್ಯನಿಪುಣತೆಯನ್ನು ಮೆಚ್ಚಿ ತಲೆದೂಗಿದಳು ಅವಳು.

ಅವನು ನುಡಿದ "ಮುಖ್ಯವಾಗಿ ನಿಮ್ಮ ಪೂರ್ಣ ಅಭಿಲಾಷೆಯನ್ನು ತಿಳಿದುಕೊಳ್ಳದಿದ್ದುದರಿಂದ ನಾನಿನ್ನೂ ದೃಢಪಡಿಸಿಲ್ಲ. ಸುಮ್ಮನೆ ನೋಡಿ ಕೊಂಡು ಬಂದಿರುವೆ ಅಷ್ಟೆ."

"ಅನುಕೂಲವಾಗಿದ್ದರೆ ನೋಡೋಣ. ನಿಮ್ಮ ಪ್ರಯತ್ನ ತುಂಬಾ ಶ್ಲಾಘ್ಯವಾದುದು."

"ಬಿಡಿ. ಇದೇನು ವಿಶೇಷ ಕೆಲಸವಲ್ಲ. ಬಿಡುವಿನ ವೇಳೆಯಲ್ಲಿ ಸಣ್ಣ ಚಟುವಟಿಕೆ ಅಷ್ಟೆ. ಅದಕ್ಕಿಂತ ಏನೇನೂ ಹೆಚ್ಚಲ್ಲ."

"ಇಂತಹ ಶ್ರದ್ಧೆ ಎಲ್ಲರಿಗೂ ಇರಬೇಕಲ್ಲ ?"

"ಯಾರಿಗಿಲ್ಲದಿದ್ದರೂ ನಿಮಗಂತೂ ಉಂಟು ಮೇಡಂ !"

ಅವಳು ಘೊಳ್ಳನೆ ನಕ್ಕುಬಿಟ್ಟಳು.

"ನೋಡಿ, ಮೇಡಂ ! ನನಗೆ ನಿಮ್ಮ ಶ್ರದ್ಧಾನಿಷ್ಠೆಗಳ ಪರಿಚಯ
ವಿದ್ದುದರಿಂದ ಹುಡುಕುವ ಮನಸ್ಸು ಮಾಡಿದೆ. ಅಲ್ಲದೆ ನನ್ನ ಆಸಕ್ತಿಯು
ಇದರಲ್ಲಿ ಇಲ್ಲದಿಲ್ಲ. ಅಂದಮೇಲೆ, ಇದೇನೂ ವಿಶೇಷವಲ್ಲ."

"ಹಾಗಾದರೆ ಎರಡೂ ಕಡೆಯ ನಿಷ್ಠೆ ಒಗ್ಗೂಡಿದಂತಾಯಿತು."

"ಹೌದು ಮೇಡಂ !"

ಅವನು ಮೇಜಿನ ಮೇಲಿದ್ದ ಪತ್ರಿಕೆಯಲ್ಲಿದ್ದ ಮನೆಗಳ ಜಾಹೀರಾ
ತನ್ನು ಮುಂದಿಟ್ಟು ನುಡಿದ "ಮನೆಗಳ ವಿಳಾಸ ಸುಲಭವಾಗಿ ಸಿಗುವುದ
ರಿಂದ ಹುಡುಕುವುದೇನೂ ಕಷ್ಟವಲ್ಲ. ಸಂಜೆಯ ಹೊತ್ತಿನ ವಾಯುವಿಹಾರ
ಎಂದುಕೊಳ್ಳಿ !"

"ಆದರೂ ನೀವು ಬಹಳ ಜಾಣರು ! ಹೇಳಿದ್ದೇ ತಡ ಮನೆ ಹುಡು
ಕಿಯೂ ಬಿಟ್ಟಿದ್ದೀರಿ !"

"ಯಾವುದಾದರೊಂದು ಮನಸ್ಸಿಗೆ ಬಂದಿತೆಂದರೆ ಅದನ್ನು ಮಾಡಿಯೇ
ತೀರಬೇಕು. ಅದು ನನ್ನ ಮರ್ಜಿ !" ರವಿವರ್ಮ ಶಾಂತಭಾವದಿಂದ
ಉತ್ತರಿಸಿದ.

"ಒಳ್ಳೆಯದಾಯ್ತು. ಆದರೆ, ಹಣದ ಕೊರತೆಯೊಂದುಂಟಲ್ಲ ?"

"ಅದಕ್ಕೂ ಏರ್ಪಾಡು ಮಾಡೋಣ. ಯಾವುದಾದರೊಂದು
ಬ್ಯಾಂಕಿನಲ್ಲಿ ತೆಗೆಯಬಹುದು. ಮೊದಲು ನಿಮಗೆ ಮನೆ ಒಪ್ಪಿಗೆಯೆ
ನೋಡಿ."

"ಈಗ ನೋಡೋಣವೇ ?" ಕಣ್ಣುಗಳಲ್ಲಿ ಆಸಕ್ತಿ ಅರಳಿತು.

"ಆಗಬಹುದು. ಹಣದ ಆಗತ್ಯವೆಷ್ಟೆಂಬುದನ್ನು ಮೊದಲೇ ತಿಳಿದು
ಕೊಳ್ಳುವುದು ಒಳ್ಳಿತು. ಪುಸ್ತಕಗಳು ಮೊದಲ್ಗೊಂಡು ಎಲ್ಲಾ ಸಲಕರಣೆ
ಗಳೂ ಬೇಕಷ್ಟೇ ? ಇದಕ್ಕೆಲ್ಲಾ ಎಷ್ಟು ಹಣ ಬೇಕೆಂಬುದನ್ನು ಮೊದಲು
ಅಂದಾಜು ಮಾಡಿದರೆ ಮುಂದಿನ ನಿರ್ಣಯ ನನ್ನದು."

"ಅಂದಹಾಗೆ, ನಿಮಗೊಂದು ನಾಣ್ಯ ತೋರಿಸುವೆ. ಮೊನ್ನೆ ನನ
ಗಿದು ದಾರಿಯಲ್ಲಿ ಸಿಕ್ಕಿತು."

ನಾಣ್ಯವನ್ನು ಅವನ ಕೈಗಿಟ್ಟಳು ಹಸಾಯುವಮೂಬಾಟಾ.

"Good ! ಎಂತಹ ನಾಣ್ಯ ಸಿಕ್ಕಿದೆ ನಿಮಗೆ ? ಲಕ್ಷ್ಮಿ ಎಂದರೆ ಏನೆಂದು ತಿಳಿದಿದ್ದೀರಿ ? ಐಶ್ವರ್ಯದ ಅಧಿದೇವತೆ ! ಭಾರತೀಯರಿಗೆ ಲಕ್ಷ್ಮಿ-ಸರಸ್ವತಿಯೆಂದರೆ ಬಹಳ ಭಕ್ತಿ. ನೀವು ಎದೆಯಲ್ಲಿ ಧರಿಸಿದ್ದೀರಿ ! ಇದು ಅಲ್ಲಿರಬೇಕಾದುದೇ ಮೇಡಂ !"

"ಹಾಗಾದರೆ ಅದೃಷ್ಟ ಎನ್ನುತ್ತೀರೇನು ?"

"ಇರಬಹುದು !"

"Thank God !"

* * * *

ಆ ಮನೆಯ ಕೋಣೆಗಳು ದೊಡ್ಡವು. ಪ್ರವೇಶದ್ವಾರ ಬಲಬದಿಯಿರುವುದರಿಂದ ಅನುಕೂಲವೂ ಹೌದು. ಇಷ್ಟು ಸಮೀಪದಲ್ಲಿ ಅಂತಹ ಬೇರೊಂದು ಕಟ್ಟಡ ಸಿಗುವುದು ಅಸಾಧ್ಯ. ಅಪಾರ ಹಣಬೇಕು, ಶ್ರಮ ಸಾಧನೆಯೂ ಬೇಕು. ಅಂದಮೇಲೆ ಇಷ್ಟೆಲ್ಲ ಮಾಡಿಕೊಂಡು ಒಂದು ವೇಳೆ ಸಾಕಷ್ಟು ಮಕ್ಕಳು ದೊರೆಯದೇ ಹೋದರೆ ಹಣ ವ್ಯರ್ಥ ಹಾಳಾಗುತ್ತದೆ. ಬ್ಯಾಂಕ್ ಸಾಲ ತಲೆಯ ಮೇಲೆ.....ಎಂಬ ವಿಚಾರಮಂಥನ ತಲೆಯಲ್ಲಿ ನಡೆದಾಗಲೇ ಮೇಜಿನ ಮೇಲಿನ ಟೆಲಿಫೋನ್ ಕರೆ ನೀಡಿತು. ಟ್ರಿಣ್ ಟ್ರಿಣ್. ಟ್ರಿಣ್. ಟ್ರಿಣ್.

ಹನಾಯಮಾಬಾಟಾ ಏಳುವುದರೊಳಗಾಗಿ ಪುನಃ ಟಂಟಣಿನಾದ.

ಟ್ರಿಣ್. ಟ್ರಿಣ್. ಟ್ರಿಣ್. ಟ್ರಿಣ್.

ಎಷ್ಟೋ ಸಲ ಟೆಲಿಫೋನ್ ಇಲ್ಲದಿದ್ದರೇ ಒಳ್ಳೆಯದಿತ್ತೇನೋ ಎಂಬ ಬೇಸರ ತರುತ್ತದೆ ತಪ್ಪಾಗಿ ಬರುವ ಕರೆಗಳಿಂದ. ಆ ಯೋಚನೆಯಿಂದಲೇ ಮೌತ್ ಪೀಸಿಗೆ ಕೈ ಹಚ್ಚಿದಳು.

"ಹಲೋ.....!"

"ಹಲೋ, ಮೇಡಂ ! ನಮಸ್ಕಾರ ! ನಾನು ರವಿವರ್ಮ."

"ಓ ನಮಸ್ಕಾರ ! ಏನು ಹೇಳಿ !"

"ಪತ್ರಿಕೆಯಲ್ಲಿ ಶಾಲೆಯ ವಿಚಾರ ಜಾಹೀರಾತು ಕೊಟ್ಟಿದ್ದೆ. ಈಗ ಜನವೂ ವಿದ್ಯಾರ್ಥಿಗಳ ಹೊಳೆ ಇಲ್ಲಿಗೆ ಹರಿಯುತ್ತಿದೆ !"

"ನನ್ನಲ್ಲಿಗೆ ಯಾರೂ ಬರಲಿಲ್ಲವಲ್ಲಾ ?"

"ನಾನು ಕೊಟ್ಟದ್ದು ನನ್ನ ವಿಳಾಸ. ನಿಮಗೆ ತೊಂದರೆಯಾಗಬಾ
ದೆಂದು ಎಚ್ಚರ ವಹಿಸಿದೆ ಅಷ್ಟೆ. ಎಲ್ಲಾ ಮಕ್ಕಳಿಗೂ ಮುಂದಿನವಾ
ವಿಳಾಸ ತಿಳಿಸುವುದಾಗಿ ಹೇಳಿರುವೆ. ಇನ್ನು ಮಕ್ಕಳು ಬರಲಾರರು ಎಂಬ
ಭಯ ಬೇಡ."

"ಥ್ಯಾಂಕ್ಯೂ ! ನಿಮ್ಮ ಸಹಾಯ ಮತ್ತು ಸಹಕಾರಗಳಿಗೆ ತುಂಬ
ವಂದನೆಗಳು !"

"ವಂದನೆಗಳು ! ಹಾಗಾದರೆ ಮುಂದಿನವಾರ ಶಾಲೆಯ ವಿಳಾಸ
ಕೊಡಬಹುದಲ್ಲವೇ ?

"ಆಗಲಿ, ಕೊಡಿ."

* * * *

ಓರೊಹಿಟೊ ಎದ್ದಾಗ ಸೂರ್ಯನ ಚೆಂಗಿರಣಗಳು ಕಿಟಕಿಯಲ್ಲಿ ನ್ಯೆ
ಚಾಚಿ ಬೆಚ್ಚನ್ನ ಮುದ್ದು ಕೊಡುತಿದ್ದವು. ಊರೆಲ್ಲಾ ಆಗಲೇ ದಿನಚರಿ
ಆರಂಭವಾಗಿದೆ ರಸ್ತೆಗಳಲ್ಲಿ ಕಾರುಗಳು ಹರಿವ ಭರಾಟೆ ಕಿವಿಗಳನ್ನು ಮುಟ್ಟು
ತ್ತಿದೆ. ಅಂಗಡಿಗೆ ಹೋಗಿ ಪತ್ರಿಕೆ ತರಬೇಕಾಗಿತ್ತು.

ಮಡದಿ ಪತ್ರಿಕೆಗಳಿಗಾಗಿ ಕಾತರಿಸುತ್ತಾಳೆ.....ಆ ಯೋಚನೆಯಿಂದಲೇ
ಪ್ರಾತರ್ವಿಧಿಯನ್ನು ಚುರುಕಾಗಿ ಮುಗಿಸಿ ಪತ್ರಿಕೆ ಕೊಂಡು ತಂದ. ಅವಳ
ಚಹ ಮುಂದಿಡುತ್ತ "ಇಂದೇನು ಇಷ್ಟು ನಿದ್ದೆ ?" ಎಂದಳು.

"ಚೆನ್ನಾದ ನಿದ್ದೆ, ಅಷ್ಟೆ. ನೀನೇಕೆ ಎಬ್ಬಿಸಲಿಲ್ಲ ?"

ಅವಳು ನಕ್ಕುಬಿಟ್ಟಳು "ಚೆನ್ನಾಗಿ ನಿದ್ದೆ ಮಾಡಲಿ ಅಂತ ಸುಮ್ಮ
ನಾದೆ. ಅಂದಹಾಗೆ ರಾತ್ರಿ ನನಗೊಂದು ಕನಸು ಬಿತ್ತು. ಏನು
ಊಹಿಸು !"

"ಏನೋ ಒಳ್ಳೆಯದಿರಬಹುದು."

"ಏನಿರಬಹುದು ಊಹಿಸು."

"ದುಡ್ಡು ಕಾಸು ಬಂದಿತ್ತೆ ?"

"ಡಾರ್ಲಿಂಗ್ ಇಲ್ಲಿ ಕೇಳು ! ನಾನು ಕನಸಿನಲ್ಲಿ ಏನು ಮಾಡಿದೆ
ಗೊತ್ತೇ ? ನಾಣ್ಯವನ್ನು ಹಿಡಿದು ಮೇಲಕ್ಕೆ ಹಾರಿಸಿ ಲಕ್ಷ್ಮಿ ಮೇಲ್ಮೈ
ಆಗಿ ಬಿದ್ದರೆ ಶಾಲೆ ನಡೆಸುವೆ" ಎಂದೆ. ಕೆಳಗೆ ಬಿದ್ದ ನಾಣ್ಯ ನೋಡಿದರೆ

ಲಕ್ಷ್ಮಿ ಚಿತ್ರವೇ ಮೇಲಾಗಿ ಬಿದ್ದಿತ್ತು ! ಅಹಾ ! ಎಂತಹ ಆನಂದವಾಯ್ತು ಗೊತ್ತೇ ? ನಾಣ್ಯವನ್ನು ಎದೆಗೊತ್ತಿಕೊಂಡೆ. ಆ ಮುಹೂರ್ತದಲ್ಲಿ ಅದ ರಲ್ಲಿ ಏಸು ಸ್ವಾಮಿಯನ್ನು ಕಂಡುಕೊಂಡೆ ಎಂದರೆ ವಿಶೇಷವಲ್ಲ. ಅನಂತರ, ಬೆಳಗಾಗೆದ್ದ ಮೇಲೆ ಅದನ್ನು ಮತ್ತೊಮ್ಮೆ ಪರೀಕ್ಷಿಸೋಣ ಎನಿಸಿತು. ಅದೇ ರೀತಿ ನಾಣ್ಯವನ್ನು ಮಿಡಿದು ಹಾರಿಸಿದೆ. ಪುನಃ ಮೇಲ್ಮೈಯಾಗಿ ಲಕ್ಷ್ಮಿ ಚಿತ್ರವೇ ಬಿತ್ತು ! ಇದಕ್ಕೇನು ಹೇಳುತ್ತಿ ?"

"ಭೇಷ್ ! ನೀನು ಗೆದ್ದೆ ಶುಭೆ !"

"ನಾನು ಯೋಚಿಸುವುದೂ ಅದನ್ನೇ ! ನಾಣ್ಯ ಶುಭ ಹಾರೈಸು ತ್ತಿದೆ !"

"ಒಳ್ಳೆಯದು..... God bless you !"

* * * *

ಶಾಲೆಗೆ ಬೇಕಾದ ಲೈಸೆನ್ಸ್ ಮತ್ತೊಂದು ಮಗದೊಂದು ಬೇಡಿ ದಾಗಲೇ ಕೈಗೂಡಿ ಬಂದುದು ಅತೀವ ಸಂತಸ. ಹಿಂದೆಲ್ಲಾ ಯಾವೊಂದು ಕೆಲಸವೂ ಇಷ್ಟು ಸುಗಮವಾಗಿ ಕೈಗೂಡಿದುದಿಲ್ಲ. ಇದೇನೋ ವಿಶೇಷ..... ಎಂತಲೇ ಹೇಳಬೇಕು. ನಾಣ್ಯ ಸಿಕ್ಕಿದ್ದು ಶುಭ ಮುಹೂರ್ತದಲ್ಲಿ. ಅಂತಲೇ ಯಾವೊಂದು ಕೆಲಸಕ್ಕೆ ಕೈ ಹಾಕಿದರೂ ತಟ್ಟನೆ ಕೈಗೂಡುತ್ತದೆ. ನಾನು ಏಸು ಸ್ವಾಮಿಯೇ ಕರುಣಾಮೂರ್ತಿ ಎಂದುಕೊಂಡಿದ್ದರೆ ಅದಕ್ಕಿಂತಲೂ ಕರುಣಾಮಯಿ ಈ ಲಕ್ಷ್ಮಿ. ನನ್ನ ಭಕ್ತಿಯೇ ಆಕೆಯನ್ನು ನನ್ನ ಬಳಿಗೆ ಕರೆತಂದಿರಬಹುದು ಎಂಬ ಯೋಚನೆಯೂ ಬರುತ್ತದೆ. ಆದರೂ ಆಕೆ ಯನ್ನು ಕರುಣಾಮಯಿ ಎಂಬುದನ್ನು ಆತ್ಮಶಃ ಒಪ್ಪಿಕೊಳ್ಳಲೇಬೇಕು ಎಂಬುದನ್ನು ಯಾವ ಕಾರಣಕ್ಕೂ ಬಿಟ್ಟುಕೊಡಲಾರೆ..... ಎಂಬುದು ಹೃದಯದ ದೃಢ ನಿರ್ಧಾರ. ಹನಾಯಮಾಬಾಟ ಆಫೀಸಿನ ಮೆಟ್ಟಿಲಿಳಿ ಯುತ್ತ ಇನ್ನು ಶಾಲೆ ತೆರೆಯಲು ಹೆಚ್ಚು ಕಾಲ ಬೇಕಾಗದು ಎಂದು ಕೊಂಡಳು ಮನದಲ್ಲಿ. ಆನಂದದ ಉಯ್ಯಾಲೆಯೇರಿ ತುಯ್ಯುಲಾಡಿದುವು ಮನಃಪ್ರಾಣಗಳು.

ಹತ್ತು ಮೂರು ಕಳೆಯುವಷ್ಟರಲ್ಲಿ ಕಪ್ಪನೆ ಮಿಂಚುವ ಕಾರೊಂದು ಗಕ್ಕನೆ ಬಳಿಯಲ್ಲಿ ನಿಂತಿತು. ಅದರೊಳಗಿನಿಂದ ಹೊರ ತಲೆ ಹಾಕಿದ

ವಿದ್ಯಾ ಇಲಾಖೆಯ ಡೈರೆಕ್ಟರ್ "ಹಾಯ್! ಎಲ್ಲಿಗೆ ಹೊರಟದ್ದಿ ಮಿಸೆಸ್ ಹನಾಯಮಾಬಾಟ ?" ಎಂದು ಕೇಳಿದ.

"ಹಾಯ್! ನಮಸ್ಕಾರ!" ಎಂದ ಅವಳು ಪುನಃ "ಮನೆ ಕಡೆಗೆ! ನೀನೆಲ್ಲಿಗೆ ?"

"ನನ್ನದು ಇತ್ತಲೇ. ಪರವಾಯಿಲ್ಲ; ಬಾ, ನಿನ್ನನ್ನು ಬಿಟ್ಟು ಬರುವೆ!"

ಹನಾಯಮಾಬಾಟ "ಥ್ಯಾಂಕ್ಯೂ!" ಎನ್ನುತ್ತ ಕಾರನ್ನು ಹತ್ತಿದಳು. ಎದೆಯಲ್ಲಿ ಆನಂದದ ಕಿಡಿಗಳು ಒಡೆದು ಮೂಡಿದುವು.

"ನೀನೀಗ ಏನು ಮಾಡುತಿದ್ದಿ ? ಏನಾದರೂ ಮಾಡಬೇಕೆಂಬ ಉದ್ದೇಶವಿದೆಯೆ ?"

"ಆರು ತಿಂಗಳ ವಿಶ್ರಾಂತ ಜೀವನ ನಡೆಸಿದ್ದಾಯ್ತು. ಇನ್ನು ಟುಟೋರಿಯಲ್ ಕ್ಲಾಸ್ ನಡೆಸಬೇಕೆಂದಿರುವೆ."

"ಒಳ್ಳೆಯದು! ಕ್ಲಾಸ್ ಸಾಲದು. ಟುಟೋರಿಯಲ್ ಕಾಲೇಜು ತೆರೆ. ಎಲ್ಲಾ ಸಬ್ಜಕ್ಟುಗಳೂ ಇರಲಿ ಏನೇನು ಸಹಾಯ ಬೇಕೋ ಮಾಡೋಣ."

"ಓ ತುಂಬ ಸಂತೋಷ. ಥ್ಯಾಂಕ್ಯೂ!"

* * * *

ಕಾಲೇಜ್ ತುಂಬಾ ಜೀವ ಕಳೆಯಿಂದ ಬೆಳಗುತ್ತಿದೆ.

ಮೇಡಂ ಹನಾಯಮಾಬಾಟ ಪಾಠ ಮಾಡುತಿದ್ದಾಳೆ. ಕಿಕ್ಕಿರಿದು ತುಂಬಿದ ತರಗತಿ ನಡೆಯುತ್ತಿರುವುದು ಸುಸಜ್ಜಿತವಾದ ಕೊಠಡಿಯಲ್ಲಿ. ತರಗತಿ ಇನ್ನೇನು ಕೊನೆಗಾಣುವ ಸಮಯ. ಶಾಲೆಯ ನೌಕರನೊಬ್ಬ ಒಂದು ಚೀಟಿಯನ್ನು ಮೇಜಿನ ಮೇಲಿಟ್ಟು ಯಾರೋ ಬಂದಿದ್ದಾರೆಂದು ಮೆಲ್ಲನೆ ತಿಳಿಸಿದ. ಆ ಚೀಟಿಯ ಕಡೆ ನೋಡುವಷ್ಟು ಸಮಯವಿರಲಿಲ್ಲ ಹನಾಯಮಾಬಾಟಾಳಿಗೆ.

"ಅವರನ್ನು 'ವಿಜಿಟರ್ಸ್' ಕೊಠಡಿಯಲ್ಲಿ ಕೂರಿಸು. ಇಷ್ಟರಲ್ಲೇ ಬಂದು ಬಿಡುವೆ."

ಬಂದವ ಹಿಂದಿರುಗಿ ಹೋದ.

ಕೆಲವೇ ನಿಮಿಷಗಳ ಒಳಗಾಗಿ ತಮ್ಮ ಗ್ರಾಸರಿಯ ಅಂಗಡಿಯ ಮಾಲೀಕ ತರಗತಿಗೇ ನುಗ್ಗಿ ಬಂದ. ಅವನ ವಿಚಿತ್ರ ವರ್ತನೆಯನ್ನು ಹನಾಯಮಾಬಾಟಾ ವಿಭ್ರಮೆಯಿಂದ ನೋಡಿದಳು.

"ಕ್ಷಮಿಸಿ ಮೇಡಂ ! ನಿಮಗೆ ಲಾಟರಿಯಲ್ಲಿ ಪ್ರಥಮ ಬಹುಮಾನ ಬಂದಿದೆ ! ನೀವಿಂದು 'ಸೆಂಗನ್ ಸಾಮ !' (ಭಾಗ್ಯಲಕ್ಷ್ಮಿ!)

ಅವನ ಆನಂದೋತ್ಸಾಹದ ಧ್ವನಿಗೆ ಮಾರುತ್ತರವಾಗಿ ಇಡೀ ತರಗತಿ ಚಪ್ಪಾಳೆ ತಟ್ಟುತ್ತ ಹರ್ಷೋದ್ಗಾರ ಮಾಡಿತು. ಆ ಹರ್ಷ ಸೂಚನೆಗೆ ತಡೆಯೇ ಇಲ್ಲವೇನೋ ಎಂಬಷ್ಟು ಸುದೀರ್ಘ ಕರ ತಾಡನ.



# ಜೀವನ ವೇದಿ

ಸಾಕ್ಷರಾ ವಿಪರೀತಾಶ್ಚೇತ್ ರಾಕ್ಷಸಾ ಏವ ಕೇವಲಂ

ಟ್ರ್ರಣ್. ಟ್ರ್ರಣ್. ಟ್ರ್ರಣ್. ಟ್ರ್ರಣ್.

ಮೇಜಿನ ಮೇಲಿನ ಟೆಲಿಫೋನಿನ ಕರೆ!

ಆ ಕರೆಗಳಿಗೆ ಬಿಡುವೆಂಬುದೇ ಇಲ್ಲ. ಒಮ್ಮೊಮ್ಮೆ ಅದರ 'ಮೌತ್ ಪೀಸ್' ಕೆಳಗಿಟ್ಟು ಕೆಲಸ ಪೂರೈಸಲೇ ಎಂಬ ಯೋಚನೆಯೂ ಬರುತ್ತದೆ. ಆದರೆ ಅದು ಸಾಧ್ಯವೇ ಇಲ್ಲ. ಕಾರ್ಖಾನೆಯ ಆಫೀಸು. ಗೌರವ ಸ್ಥಾನ. ಘನ ಕಾರ್ಯಭಾರ. ತುರ್ತು ಕರೆಗಳು ಬಂದೇಬರುತ್ತವೆ.

ನಿರ್ಮಲ ಬೇಸರದಿಂದಲೇ ಉತ್ತರಿಸಿದಳು "ಹಲ್ಲೋ....!"

"ನಿಮ್ಮ ಡಿಯರ್! ಎಷ್ಟು ಹೊತ್ತು ಮಾಡಿದೆ? ನೀನು ಸೀಟ ನಲ್ಲಿರಲಿಲ್ಲವೇ?"

ಆ ಧ್ವನಿ ಕೇಳಿದೊಡನೆಯೇ ಮೈ ಪುಳಕಿತವಾಗಿ ಬಿಸಿ ನೆತ್ತರಿನ ಝರಿ ಮೈತುಂಬ ಝಿಲ್ಲನೆ ಹರಿದಾಡಿತು. ಆ ಹೃದಯಹಾರೀ ಕರೆ ಅನಿರೀಕ್ಷಿತವಾದುದರಿಂದ.

"ಓ! ಯಾವಾಗ ಬಂದಿರಿ? ನಿಮ್ಮ ದನಿ ಕೇಳಿ ಎಷ್ಟುಕಾಲ ವಾಗಿತ್ತು?"

"ಈಗಷ್ಟೆ ಬಂದೆ. ಇನ್ನೂ ಮುಖ ಮಜ್ಜನ ಮಾಡಿಲ್ಲ. ಅದರೊಳಗೇ ನಿನ್ನ ಮಾತಾಡಿಸುವ ಹುಚ್ಚು! ಭ್ರಮರ ಮಕರಂದವನ್ನು ಹೀರುವ ವರೆಗೂ ಸಹಿಸದು. ನಿನ್ನ ಎಲ್ಲಿ ನೋಡಲಿ ಹೇಳು? ಈಗಾಗಲೇ ಆಫೀಸು ಮುಚ್ಚುವ ಹೊತ್ತು. ನೀನಿಲ್ಲಿಗೆ ಬರುತ್ತೀಯೋ? ಅಥವಾ ನಾನೇ ಬರಲೋ?"

ಹಾಲ್ಸಕ್ಕರೆಯ ಝರಿಯೇ ಹರಿದು ಬಂತು ದನಿಯಲ್ಲಿ.

ಪ್ರಶ್ನೆಗಳ ಮೇಲೆ ಪ್ರಶ್ನೆಗಳು! ಮದುವೆ ಆದಮೇಲಾದರೆ ಚಿಂತೆಯಿಲ್ಲ. ಈಗ ಈ ಹುಚ್ಚು ಅಧಿಕವಾದರೆ ಕಷ್ಟವೇ......ಎದೆಯ ಹಕ್ಕಿ ಚಡಪಡಿಸಿತು. ವ್ಯಾಪ್ತಿಗೆ ಮೀರಿ ಮಿಡಿಯುತ್ತಿದೆ ಪುಕ್ಕಲು ಹೃದಯ. ಯೋಚಿಸಲು ಸಮಯ ಕೊಡದಿದ್ದರೆ ಹೇಗೆ?

"ಏನು ಹೇಳುತ್ತಿ? ಏಕೆ ಮಾತಿಲ್ಲ?"

"ನೀವು ಮನೆಗೆ ಬರುವಿರಾದರೆ ಒಳ್ಳೆತು. ಅಪ್ಪ-ಅಮ್ಮ ಇದ್ದಾರೆ."

"ಇಲ್ಲ ಡಿಯರ್. ಇಲ್ಲೀ ಎಲ್ಲಾದರೂ.....ಸ್ವಲ್ಪ ಹೊತ್ತು?"

"ಉಹೂ, ನೀವು ಮನೆಗೆ ಬನ್ನಿ. ಎಲ್ಲಾ ರೀತಿಯಿಂದಲೂ ಸರಿ ಹೋಗುತ್ತೆ. ಹೊರಗಡೆ ಸಂಧಿಸುವುದಕ್ಕಿಂತ ಇದು ತುಂಬಾ ಒಳ್ಳೆಯದು. ನಿಮ್ಮ ಪರಿಚಯದಿಂದ ಅಪ್ಪ-ಅಮ್ಮ ಸಂತೋಷಪಡುತ್ತಾರೆ....ಸುಧೀರ್, ಅನ್ಯಥಾ ಭಾವಿಸಬೇಡಿ."

"ನನಗೆ ಆಶ್ಚರ್ಯ ಮೈ ಲವ್! ನಿನಗೆ ಭಯವೇ? ಅಥವಾ ನಂಬುಗೆ ಇಲ್ಲವೇ?"

"ನೀವು ಏನಾದರೂ ಅಂದುಕೊಳ್ಳಿ. ಇದು ನನ್ನ ಬೇಡಿಕೆ..... ದಯವಿಟ್ಟು....."

"ಅಂತೂ ಬಲೂ ಹಠಮಾರಿ! ನಿನ್ನ ಮಾತೇ ಗೆಲ್ಲಬೇಕು. ಮದುವೆಯಾದಮೇಲೆ ನೀನು ಇನ್ನೆಷ್ಟು 'ಬಾಸ್ ಓವರ್' ಮಾಡುತ್ತೀಯೋ? ಏನೋ...."

ಎರಡು ಕಡೆಯೂ ಕಿಲಕಿಲ ನಗುವಿನಲಹರಿ ಚಿಮ್ಮಿ ಹರಿಯಿತು.

"ಮೈ ಡಾರ್ಲಿಂಗ್! ಐ ಸೀ ಯೂ ದೇರ್!"

"ಆಗಲಿ, ತುಂಬ ಥ್ಯಾಂಕ್ಸ್!"

ಅವನ ಉತ್ಕಟ ಆಸೆ-ಆಕಾಂಕ್ಷೆಗಳಿಗೆ ಮನಸ್ಸು ಮಣಿದುದನ್ನು ಗಮನಿಸಿತು ಚಿತ್ತ. ತಲೆಯ ತುಂಬ ಅದೇ ವಿಷಯವನ್ನು ತುಂಬಿಕೊಂಡು ಮೇಜಿನ ಮೇಲೆ ದಿಟ್ಟಿ ಹೊರಳಿಸಿದರೆ ಫೈಲುಗಳ ರಾಶಿ. ಇನ್ನೊಂದು ಗಂಟೆ ಕೆಲಸ ಮಾಡದಿದ್ದರೆ ನಾಳೆಗೆ ಫೈಲುಗಳು ಬೆಳೆಯುತ್ತವೆ. ಸುಧೀರ್ ಇಲ್ಲಿ ಕೆಲವು ದಿನ ಉಳಿದರೆ ಕಷ್ಟವೇ. ಕೆಲಸ ಕಲಸುಮೇಲೋಗರವಾಗಿ ತಲೆ

ಚಿಟ್ಟು ಹಿಡಿಯುವುದರಲ್ಲಿ ಸಂಶಯವಿಲ್ಲ.....ಯೋಚನೆಯ ರಭಸ ತಲೆಯ ಸುಳಿಸುತ್ತುತಿತ್ತು ವರ್ತುಲಗಳನ್ನು ನಿರ್ಮಿಸುತ್ತ ಉಂಗುರುಂಗುರವಾಗಿ

ಇಂದೇಕೋ ತುಂಬಾ ದಾಹ. ಮೇಜಿನ ಮೇಲಿದ್ದ ಜಗ್ಗಿನ ನೀರು ಮುಗಿಯಿತು. ತೋರು ಬೆರಳಿಂದ ಬೆಲ್ಲನ್ನು ಒತ್ತಿದಳು ನಿರ್ಮಲ. ಹೊ ಬದಿಯಲ್ಲಿದ್ದ ಜವಾನ ಬಂದು ನಿಂತ.

"ಪೈನಾಪಲ್ ಜ್ಯೂಸ್ ತಾ." ಎಂದ ಅವಳು ಪರ್ಸಿನಿಂದ ಹಣವನ್ನು ತೆಗೆದುಕೊಡುತ್ತ "ನೀನೂ ಚಹವನ್ನು ತೆಗೆದುಕೊ."

ಸೇವಕ ಹಣದೊಂದಿಗೆ ಹೊರಟು ಹೋದ.

ಪದೇ ಪದೇ ನಡೆಯುವ ಮೀಟಿಂಗ್‌ಗಳು, ಭಾರಿ ಗಿರಾಕಿಗಳು, ಸಂದರ್ಶಕರು ಮುಂತಾದ ಕಾರಣದಿಂದ ನಿತ್ಯದ ಕೆಲಸ ಕಾರ್ಯಗಳಿಗೆ ಅಡಚಣೆ. ಮೂರು ವರ್ಷಗಳ ಅಧಿಕಾರದಲ್ಲಿ ಅನುಭವ ಪಕ್ವವಾಗಿ ದಳದಳ ಅರಳಿತ್ತು ಮನಸ್ಸು. ಜೀವನದ ಹೆಬ್ಬಾಗಿಲನ್ನು ತೆರೆಸಲು ಸಿದ್ಧವಾಗಿದೆ ಹೃದಯ ನಿಕುಂಜ.....ಸುಧೀರನ ಬಗ್ಗೆ ಎಷ್ಟು ಯೋಚಿಸಿದ್ದರೂ ದೃಢವಾದ ನಿರ್ಧಾರಕ್ಕೆ ಬರಲಾಗಿಲ್ಲ. ಅವನ ಕೆಲವೊಂದು ವಿಚಾರಗಳನ್ನು 'ಅತಿ' ಎನ್ನುತ್ತದೆ ಅಂತರಂಗ. ಆದರೆ, ಸರ್ವಾಂಗ ಶುದ್ಧವಾದ ವ್ಯಕ್ತಿ ಈ ಸಮಾಜದಲ್ಲಿ ಅಪರೂಪವೇ. ಅಂದಮೇಲೆ, ಇದ್ದುದರಲ್ಲೇ ಉತ್ತಮ ವಾದುದನ್ನು ಆರಿಸಿಕೊಂಡು ಜೀವನ ತುಂಬಿಕೊಳ್ಳುವುದು ಒಳಿತು.....

ಯೋಚನೆ ಅಲ್ಲಿಗೆ ಬಂದು ನಿಂತುಹೋಯಿತು. ಹಾಗೇ ಕುರ್ಚಿಯ ಬೆನ್ನಿಗೆ ಕೆಲವು ಕ್ಷಣ ತಲೆಯಾನಿಸಿದಳೇನೋ.....ಆಗಲೇ ಪಾದರಕ್ಷೆಗಳ ಪಟಪಟ ಸದ್ದು ಕರ್ಣಪಟಲವನ್ನು ಅಪ್ಪಳಿಸಿತು. ಸೇವಕ ಮೇಜಿನ ಮೇಲೆ ಪೈನಾಪಲ್ ಜ್ಯೂಸ್ ಶೀಸೆಗಳನ್ನು ಇಟ್ಟ. ತೆರೆದ ಶೀಸೆ. ಹೀರು ಕೊಳವೆ... ತಲೆಯೆತ್ತುವುದರೊಳಗಾಗಿ ಪುನಃ ಕಾರಿಡಾರಿನಲ್ಲಿ ಧೀರ ನಡಿಗೆಯ ವಿಶಿಷ್ಟ ಸದ್ದು! ಅವು ಅಲ್ಲಿ ಕೇಳಿಸಿದಾಗಲೇ ವ್ಯಕ್ತಿಯನ್ನು ಪರಿಚಯಿಸುವುದು ದಿಟ. ಬಾಗಿಲೆಡೆಗೆ ಹೊರಳಿದ ದೃಷ್ಟಿ ಚಲಿಸಲಿಲ್ಲ. ಕೆಲವೇ ಕ್ಷಣಗಳಲ್ಲಿ ಸುಧೀರ್ ಮೈದೋರಿದ. ತೆಕ್ಕನೆ ದೃಷ್ಟಿಗಳು ಒಂದುಗೂಡಿ ಮುಗುಳು ನಗೆ ಅರಳಿತು ತುಟಿಗಳಲ್ಲಿ. ಅವನು ಅಲ್ಲಿಂದಲೇ "ಹಾಯ್, ಚಿನ್ನಾ!" ಎಂದ ಪರಮಾನಂದ ಸೂಚಕವಾಗಿ.

ಅವನು ಈಗಾಗಲೇ ಅಷ್ಟು ಸ್ವಾತಂತ್ರ್ಯ ವಹಿಸಿ ಸೇವಕನ ಮುಂದೆ ಹಾಗೆಂದುದು ಸ್ವಲ್ಪ ಅಸಮಾಧಾನವೇ ಆಯಿತಾದರೂ ಸಹಿಸಿಕೊಳ್ಳುತ್ತಲೇ ಕಣ್ ಸೂಚನೆ ಕೊಟ್ಟಳು.

ಆದರೆ, ಅದರ ಮುಖ್ಯ ಭಾವಾರ್ಥ ಅತುರಕಾತರಭರಿತ ಹೃದಯವನ್ನು ಮುಟ್ಟಿದರಷ್ಟೆ? ನಿರಾಳವಾಗಿ ಪಕ್ಕದ ಕುರ್ಚಿಯನ್ನು ಆಕ್ರಮಿಸಿದ. ಮೈಮನಗಳಲ್ಲಿ ಸಂತಸ-ಲವಲವಿಕೆಗಳಿಂದ ಹುಚ್ಚೆದ್ದ ಝುರಿ ಜರ್ರನೆ ಹರಿದಾಡುತ್ತಿದೆ. ಹರೆಯ ಉಕ್ಕುವ ತರುಣ ನಿಗಿನಿಗಿ ನಲಿಯುತ್ತಿದ್ದಾನೆ. ಅತ್ತರಿನ ಲೇಪನ ಗಮುಗಮಿಸುತ್ತಿದೆ. ಗರಿಗರಿಯಾದ ನಾಗರಿಕ ಉಡುಪು, ಆಸೆ-ಆತುರಗಳ ಮಿಂಚಿನ ಛಾಯೆ ಕಣ್ಣುಗಳಲ್ಲಿ.

ಅವನು ಮೊದಲಿಂದಲೂ ಅಲಂಕಾರಪ್ರಿಯ; ಬಲು ಮಾತಾಳಿ.

ಆಗಲೇ ಎದ್ದು ನಿಂತವಳು ಗರ ಬಡಿದವಳಂತೆ ನಿಂತೇ ಇದ್ದಾಳೆ. ಈ ಮೊದಲು ಎಂದೂ ಎದ್ದು ನಿಂತು ಸ್ವಾಗತಿಸಿದವಳಲ್ಲ. ಇಂದೇಕೆ ಎದ್ದೆ ಎಂಬುದು ಮನಸ್ಸಿಗೆ ಹೊಳೆದಾಗ ಕೃತಿ ನಡೆದುಹೋಗಿತ್ತು. ಅವಳನ್ನು ನೆಟ್ಟ ದಿಟ್ಟಿಯಿಂದ ನೋಡುತ್ತ "ಇಂದೇನು ವಿಶೇಷ?" ಎಂದ ಸುಧೀರ್, ಮೈಯೆಲ್ಲ ಸಂತಸದ ಬೀಡಾಗಿ. ಪ್ರಶ್ನಾರ್ಥಕವಾದ ಹುಬ್ಬುಗಳು ಏರಿ ಇಳಿದುವು..

ಒಂದೆರಡು ಕ್ಷಣ ಏನುತ್ತರಿಸಬೇಕೋ ಹೊಳೆಯದ ನಿರ್ಮಲೆ ಮುಗುಳು ನಗೆಯೊಡನೆ "ಸುಮ್ಮನೆ" ಎಂದಷ್ಟು ನುಡಿದು ಕುಳಿತುಕೊಂಡಳು. ಮೈಯಲ್ಲಿ ನೆತ್ತರಿನ ಝುರಿ ಜುಮ್ಮನೆ ಹರಿದಾಡಿತು ವ್ಯಾಪಕವಾಗಿ.

ತೆರೆದ ಜ್ಯೂಸ್ ಶೀಸೆಯನ್ನು ಮುಂದಿಟ್ಟು ಇನ್ನೊಂದು ಶೀಸೆಯ ಬಾಯಿ ತೆರೆಯಲು ಸೇವಕನಿಗೆ ಹೇಳುವಷ್ಟರಲ್ಲಿಯೇ ಅವಳನ್ನು ತಡೆದು 'ಬೇಡ ಇದೇ ಸಾಕು. ನಿನಗೊಂದು ಗುಟುಕು- ನನಗೊಂದು ಗುಟುಕು' ಎಂದ ಸುಧೀರ್ ತುಂಟನಗೆಯನ್ನು ಬೀರಿ.

ಅವಳಾಗಲೇ ಅದರಲ್ಲಿ ಒಂದು ಗುಟುಕು ಹೀರಿದ್ದಾಳೆ. ತಾನೊಂದು ಗುಟುಕು ಹೀರಿ ಶೀಸೆಯನ್ನು ಅವಳ ಮುಂದಿಟ್ಟ. ಆ ಪ್ರಸಂಗೋಚಿತವಾಗಿ ಸಮವಸ್ತ್ರಧಾರೀ ಸೇವಕ ಹಿಂದಿರುಗಿ ಹೋದ.

ಪರ್ಸನಲ್ ಅಸಿಸ್ಟೆಂಟ್ ಒಮ್ಮೆ ಹಣಿಕಿ ನೋಡಿ ಹಿಂದಿರುಗಿದಳು
ಕೆಲಸ ಇನ್ನೂ ಬಹಳಷ್ಟು ಉಳಿದಿತ್ತು. ಕೊಠಡಿಯಲ್ಲಿ ಬೇರಾರೂ ಇಲ್ಲ
ನಿಶ್ಶಬ್ದ. ನೀರವ. ನಿರಾತಂಕ.

"ನಿನ್ನ ಜ್ಯೂಸ್ ಹಾಗೇ ಉಳಿಯಿತಲ್ಲ ; ಕುಡಿ!"

"ನಿಮಗೆ.....?"

"ನನಗೆ ಬೇಡವೇ ಬೇಡ. ಅಷ್ಟೇ ಸಾಕು."

ನಿರ್ಮಲ ಶೀಸೆಯನ್ನು ಮುಂದಿಟ್ಟುಕೊಂಡು ಜ್ಯೂಸ್ ಹೀರತೊಡಗಿ
ದಳು. ಆ ಒಂದೊಂದು ಕ್ಷಣವನ್ನು ಕಾಯುವ ಸಹನೆ-ಸಮಯ ಎರಡೂ
ಇಲ್ಲ; ಸುಧೀರನಿಗೆ.

"ಆಯಿತೇ ? ಇನ್ನು ಹೊರಡೋಣವೇ ಮೈ ಲವ್ !"

ಅವನ ಆಕರ್ಷಣೀಯ ನಿಲುವು, ಪ್ರೀತಿ, ಉದ್ಯೋಗ ಒಂದೊಂದೂ
ಸಮಾನಾಂತರದ ವಿಶೇಷ.....ಮಾತ್ರವಲ್ಲ; ಸೂಜಿಗಲ್ಲಿನಂತಹ ಸೆಳೆತ.
ಬೇಡವೆಂದರೂ ದೂರೀಕರಿಸಲಾಗದ.....ವ್ಯಕ್ತಿತ್ವ.

* * * *

ಇಬ್ಬರೂ ಹಿರಿಯ ಹುದ್ದೆಗಳಲ್ಲಿ ಪ್ರತಿಷ್ಠಿತರು. ಒಬ್ಬರ ಕೆಲಸ
ಇನ್ನೊಬ್ಬರಿಗೆ ತೊಡಕಲ್ಲ. ನಿರ್ಮಲ ಸ್ವಲ್ಪ ಹಿಂದೆ ಮುಂದೆ ನೋಡಿದರೂ
ನಂತರ ಸಂತಸದಿಂದ ವಿವಾಹಕ್ಕೆ ಒಪ್ಪಿಗೆ ಕೊಟ್ಟಳು. ಇಬ್ಬರೂ ನಲ್ಮೆ
ಯಿಂದ ಗೃಹಸ್ಥಾಶ್ರಮ ಸ್ವೀಕರಿಸಿದರು. ಸಂಸಾರಕ್ಕೆ ನಾಗರಿಕತೆಯ
ಚೌಕಟ್ಟು. ವಿಶಿಷ್ಟ ರೀತಿಯಲ್ಲಿ ಹೇಳಿ ಮಾಡಿಸಿದಂತಹ ಜೋಡಿ ವರ್ತ
ಮಾನ ಯುಗಧರ್ಮ ಜೀವನಕ್ಕೆ.

ಸುಧೀರ್ ತಿಂಗಳೆರಡು ಮಡದಿಯ ಬಳಿ ಇದ್ದು, ಹನಿಮೂನ್
ಗೋವಾದಲ್ಲಿ ಪೂರೈಸಿ ಆನಂದೋನ್ಮತ್ತನಾದ. ತಾನು ದೆಹಲಿಯಿಂದ ಇಲ್ಲಿಗೆ
ವರ್ಗ ಮಾಡಿಸಿಕೊಳ್ಳುವೆ ಎಂದು ಪ್ಲೇನ್ ಹತ್ತಿದಾಗ ನಿರ್ಮಲೆಯ ಅಶ್ರು
ಲಿಪ್ತಲೋಚನಗಳು ಬೀಳ್ಕೊಟ್ಟುವು. ಇಲ್ಲಿಂದ ಅಲ್ಲಿಗೆ ದಿನದಿನ ಕಾಗದ
ಪತ್ರಗಳು-ಟ್ರಂಕಾಲ್‌ಗಳು ಓಡಾಡಿದುವು. ಇಬ್ಬರಲ್ಲೂ ಅಗಲಿಕೆಯ ಪರಿ
ತಾಪದ ಅಳಲು ಬೆಟ್ಟದಷ್ಟು ಬೆಳೆದಿತ್ತು-ಬೆಳೆಯುತಿತ್ತು.

"ಮೈ ಲವ್, ಮೈ ಡಿಯರ್ ನನಗಿಲ್ಲಿ ಬೋರ್ ಆಗಿದೆ. ಒಂದು ತಿಂಗಳು ಇರುವಂತೆ ರಜೆ ಹಾಕಿ ಬಾ, ನಿನಗೆ ಟಿಕೆಟ್ ಕಳುಹಿಸುವೆ." ಎಂದು ಪದೇ ಪದೇ ಕೇಳಿಕೊಳ್ಳುವ ಸುಧೀರ್.

ಅವನ ಮುದ್ದಿನ ಕರೆ, ಹೊಟ್ಟೆಯ ಹಸಿವೆ ಹೇಳಿಕೆ-ಕೇಳಿಕೆಗಳು ಯಾವತ್ತೂ ಇದ್ದದ್ದೆ. ಈಗಾಗಲೇ ಮೂರು ತಿಂಗಳು ರಜೆಯಲ್ಲಿ ಕಳೆದುದರಿಂದ ಇನ್ನು ರಜೆ ಪಡೆಯುವುದು ಕಷ್ಟವೆ. ದಿನಗಳು ಯಥೋಚಿತವಾಗಿ ಓಡುತ್ತವೆ.

ನಿರ್ಮಲಳ ವಾಸಕ್ಕೆ ನಗರದಿಂದ ದೂರದಲ್ಲಿದ್ದ ಫ್ಯಾಕ್ಟರಿಯ ಬಳಿಯಲ್ಲಿಯೇ ಕ್ವಾರ್ಟರ್ಸ್. ಅಸಿಸ್ಟೆಂಟ್ ಡೈರೆಕ್ಟರಾಗಿ ಕಾರ್ಯಭಾರ. ಡೈರೆಕ್ಟರ ಮನೆ ಹತ್ತಿರದಲ್ಲೇ ಇರುವುದರಿಂದ ಆಗಾಗ ಹೋಗಿಬರುವುದುಂಟು. ಡೈರೆಕ್ಟರ್ ಒಳ್ಳೆಯವರು. ಮೂವರು ಹೆಣ್ಣು ಮಕ್ಕಳು. ಬಿಡುವಿದ್ದಾಗ ಇಲ್ಲಾ ಓಡಿಬರುತ್ತಾರೆ. ಒಬ್ಬಳೇ ಇದ್ದರೂ ಕಾಲಯಾಪನೆಗೆ ಕಷ್ಟವೇ ಇಲ್ಲ. ನಿರ್ಮಲೆ ಉದ್ಯೋಗದಲ್ಲಿ ಸ್ವರ್ಗಸುಖಿ.

ಈ ಸಲ ಆಫೀಸಿನ ಕಾರ್ಯಾರ್ಥವಾಗಿ ಬಂದಿದ್ದ ಸುಧೀರ್ ಐದು ದಿನ ಇದ್ದ. ಸಂಭ್ರಮ ಸುಖ ಸಂತೋಷಗಳ ವರ್ತುಲದಲ್ಲಿ ಮಧುರ ಜೀವನ ಕಂಡರು ದಂಪತಿಗಳು.

"ಈ ಸಾಲಿನಲ್ಲಿ ನನಗೆ ವರ್ಗವಾಗದಿದ್ದರೆ ನೀನೇ ಅಲ್ಲಿಗೆ ಬಂದುಬಿಡು. ಡಿಯರ್, ನಿನಗೊಂದು ಕೆಲಸ ಬೇಕೇಬೇಕೆಂದರೆ ಅಲ್ಲಿಯೇ ಹುಡುಕೋಣ."

"ಅದು ಸ್ವಲ್ಪ ಕಷ್ಟವೇ. ನಿಮ್ಮದು ಆಗಾಗ ಟ್ರಾನ್ಸ್‌ಫರ್ ಆಗುವ ಹುದ್ದೆ. ಅನಂತರ ನನಗೂ ನೀವು ಹೋದಲ್ಲೆಲ್ಲಾ ಕೆಲಸ ಹುಡುಕಬೇಕಾಗುತ್ತೆ. ಅದಕ್ಕಿಂತ ನೀವೇ ಇಲ್ಲಿ ಒಂದು ಖಾಯಂ ಹುದ್ದೆ ನೋಡಿಕೊಳ್ಳಿ."

ಮಡದಿಯ ಸಲಹೆಯಲ್ಲಿ ಹುರುಳಿಲ್ಲದಿಲ್ಲ. ಸುಧೀರ್ ಚಡಪಡಿಸಿದ. ತನುಮನಗಳು ಒಂದಾದರೂ ಜೀವನ ಬೆಸೆಯಲಿಲ್ಲ. ಮಡದಿಯ ಸಾಮೀಪ್ಯ ಸುದವನ್ನು ಸ್ವರ್ಗಕ್ಕೆ ಹಚ್ಚುತ್ತದೆ. ದೂರವಾದಾಗ ಕೆಳಗೆ ಕುಸಿದು ಹೊರಳುತ್ತದೆ. ಆ ಸಂಕಟ ದೂರಗೊಳಿಸುವುದೆಂದರೆ ತಾನೇ ಇಲ್ಲಿಗೆ ಬರುವುದೊಂದೇ ದಾರಿ....ಎದೆಯ ಸಲಹೆಗೆ ತಲೆ ಮಣಿದ ಸುಧೀರ್.

ಎದೆಯ ಮೊರೆ ದೇವರಿಗೆ ಮುಟ್ಟಿತೇನೋ; ಶತ ಪ್ರಯತ್ನ ಫ
ಸಿತು. ಸುಧೀರ್ ಆನಂದ ಪ್ರಮತ್ತನಾಗಿ ಬೆಂಗಳೂರಿಗೆ ವರ್ಗದ ಆರ್ಡರ
ಹಿಡಿದುಕೊಂಡೇ ಆಗಮಿಸಿದ. ಗಂಟುಮೂಟೆಗಳ ಸಹಿತ ಬಂದ ಪತಿಯನ್ನು
ತೆರೆದ ಹೃದಯದಿಂದ ಸ್ವಾಗತಿಸಿದಳು ಮಡದಿ. "ಅಂತೂ, ಪ್ರಯತ್
ಫಲಿಸಿತು" ಎಂದು ಸುಧೀರ್ ನುಡಿದಾಗ "ದೇವರು ದೊಡ್ಡವನು!" ಎಂದು
ಸಮರ್ಥಿಸಿದಳು ಮಡದಿ. ಇಬ್ಬರ ಮುಖಬಿಂಬಗಳೂ ಅರಳಿ ಹೂವಾದುವು.
ಪಲ್ಲಂಕದ ವೆಲ್ವೆಟ್ ಹೊದ್ದಿಕೆಯ ಹೂಗಳ ದಳ ಬಿರಿದುವು. ಹೂದಾನಿಯ
ಮೊಗ್ಗುಗಳು ಅರಳಿ ಸುಗಂಧ ಬೀರಿದುವು. ಆನಂದವನ್ನೇ ಪರಮಾನಂದ
ಗೊಳಿಸುವಂತಹ ರಸಪೂರ್ಣ ನೆರೆ ಉಕ್ಕಿತು.

* * * *

ಫ್ಯಾಕ್ಟರಿಯ ಕ್ವಾರ್ಟರ್ಸ್‌ನಿಂದ ಸುಧೀರನ ಆಫೀಸಿಗೆ ಏನಿಲ್ಲೆಂದರೂ
ಹದಿನೈದು ಮೈಲಿ ದೂರ. ಅಂದು, ಆ ಅಂತರ ಹೆಚ್ಚೆನಿಸದಿದ್ದರೂ ಈಗೀಗ
ಅದರ ವ್ಯಾಪ್ತಿ ಇನ್ನಷ್ಟು ಬೆಳೆಯುತ್ತಿದೆಯೇನೋ ಎಂಬಷ್ಟು ತಲೆನೋವು.
ಅವನದನ್ನು ನೇರವಾಗಿ ವ್ಯಕ್ತಪಡಿಸದಿದ್ದರೂ ಸುತ್ತು ಬಳಕೆಯ ಮಾತಿನಲ್ಲಿ
ಸುವ್ಯಕ್ತ. ಅದಕ್ಕೆ ಪರಿಹಾರವೆಂದರೆ ನಗರದಲ್ಲಿ ಮನೆ. ಅದರಿಂದ ಮಡದಿಗೆ
ಅತೀವ ಅಡಚಣೆ. ಅವಳು ಸಹಿಸಲಾರಳು ಕೂಡ.....ಎಂದೆಲ್ಲಾ ಯೋಚನೆ
ಬರುತ್ತದೆ. ಮೇಲಾಗಿ, ಕ್ವಾರ್ಟರ್ಸ್ ಮಡದಿಯದು. ಆಳುಕಾಳು ಅವಳಿಗೇ
ಸೇರಿದ್ದು. ತನ್ನ 'ಗಂಡಸು'ತನಕ್ಕೆ ಧಕ್ಕೆ! ಎಂಬ ಯೋಚನೆಗಳೆಲ್ಲಾ
ಮುಳ್ಳಾಗುತ್ತವೆ ಮನಕ್ಕೆ. ಸುಧೀರ್ ಕ್ರಮಕ್ರಮೇಣ ನೀರಿನಿಂದ ಹೊರ
ತೆಗೆದ ಮೀನಾಗಹತ್ತಿದ.

ಈ ಜಂಜಾಟವನ್ನೆಲ್ಲಾ ಬದಿಗೊತ್ತಿ ಸರಿದು ಹೋದುವು ವರ್ಷಮಾನ
ವೆರಡು.

ಮುಂದೆಂದಾದರೂ ಈ ತೊಡಕುಗಳಿಗೆಲ್ಲಾ ಅನುಕ್ರಮವಾಗಿ ಪರಿ
ಹಾರ ಕಂಡುಕೊಳ್ಳಬೇಕು ಎಂಬ ಮನೋನಿರ್ಣಯಕ್ಕೆ ತಲೆಬಾಗಿದ
ಸುಧೀರ್. ಆದರೂ, ಜೀವನದ ರಸಪೂರ್ಣಗಳಿಗೆಯ ಪ್ರೇಮ ಕಾಮಗಳು
ತನುಮನಗಳನ್ನು ಕಟ್ಟಿಹಾಕುತ್ತವೆ. ಅವನು ಹತ್ತಿರವಾಗುತ್ತಾನೆ. ಹತ್ತಿರ.
ಇನ್ನೂ ಹತ್ತಿರ. ಹತ್ತಿರ.

ಅಂದು ಭಾನುವಾರ.

ರಜೆಯ ದಿನವಾದ್ದರಿಂದ ಇಬ್ಬರೂ ಹಾಸಿಗೆ ಬಿಟ್ಟಿರಲಿಲ್ಲ. ಬಾನಂಚಿನ ಸೀಮೆಯಲ್ಲಿ ಅರುಣರವಿ ಮೂಡಿ ಬಾನೇರಿದ. ಕಿಟಕಿಯ ಕಂಬಿಗಳ ಮೂಲಕ ಅರುಣಕಿರಣಗಳು ತೂರಿ ಮೈ ಮನಗಳನ್ನು ಮುದ್ದಿಟ್ಟುವು. ಅವಳು ಹೊದ್ದಿಕೆಯನ್ನು ತಳ್ಳಿ ಎದ್ದಳು. ಸುಧೀರ್ ಕಣ್ಣುಜ್ಜಿಕೊಳ್ಳುತ್ತ,

"ಬೆಳಗಾಗದಿದ್ದರೆ ಸಾಕು ಎನಿಸುತ್ತೆ ಮೈ ಲವ್ !"

"ಸುಧೀರ್ ! ನಿಮಗೆ ಹಾಗೆನಿಸಿದರೆ ನನಗೇನೆನಿಸುತ್ತೆ ಊಹಿಸಿ !"

"ನೀನೇ ಹೇಳಬೇಕು !"

ಪ್ರಸನ್ನ ಮುಖಿಯಾಗಿ ನುಡಿದಳು ಅವಳು,

"ನನ್ನನ್ನು ನೀವು ಅರಿತುದು ಇಷ್ಟೆ.....ನೀವು ದೊಡ್ಡವರಾಗದೆ ಚಿಕ್ಕಮಗುವಾಗಿದ್ದಿದ್ದರೆ ತೊಡೆಯಮೇಲೆ ಮುದ್ದಿಸಬಹುದಿತ್ತು ! ಮನ ವಣಿಯೆ ಮುದ್ದಾಡಬಹುದಿತ್ತು."

ಇಬ್ಬರೂ ಖೊಳ್ಳನೆ ನಕ್ಕುಬಿಟ್ಟರು.

"ಅದೇನೂ ದೂರವಿಲ್ಲ. ನಾನೇ ನಿನ್ನ ಮಡಿಲಲ್ಲಿ ಬೆಳೆಯುವೆ ! ಮೈ ಡಾರ್ಲಿಂಗ್ ನಿಜವೋ ಸುಳ್ಳೋ ನೀನೇ ಹೇಳಿಬಿಡು."

ನಿರ್ಮಲೆಯ ಕೆನ್ನೆಗಳು ಕೆಂಪು ತಳೆದುವು. ನಾಚಿಕೆಯ ಪೆಂಪು ಹರಡಿತು ಮುಖದ ಮೇಲೆ ಅವಳು ಕೆನ್ನೆಯನ್ನು ಚಿವುಟಿ ಹೇಳಿದಳು "ನಾನು ಭಾವಿಸಿದ್ದೇ ಬೇರೆ. ನಾವು ಶಾಲೆಯಲ್ಲಿದ್ದಾಗ ಕೂಡಿ ಆಡುತ್ತಿರ ಲಿಲ್ಲವೇ ಅಂತಹ ಕಾಮರಹಿತ ಪ್ರೇಮ. ಈಗಿನದೇನಿದ್ದರೂ ಕಾಮ. ಕಾಮ ಸತ್ಯದ ಹುರುಳಲ್ಲ."

"ಪ್ರೇಮದ ಹುರುಳು !"

ವದನದ್ವಯಗಳಲ್ಲಿ ಆನಂದದ ಹೆದ್ದೆರೆ ಮುದ್ರೆಯೊತ್ತಿತು.

ಅವಳೆದ್ದು ದಿನಚರಿಯಲ್ಲಿ ಮನವಿಟ್ಟಳು. ಅವನು ಕಿರುಮನದ ಕಾರಸ್ಥಾನಕ್ಕೆ ಇಂಬುಕೊಟ್ಟು ಯೋಚಿಸಿದ.....ಹೆಣ್ಣಿನಾಶ್ರಯ ಎಂದಾ ದರೂ ಗೌರವಕ್ಕೆ ಕುಂದು. ಈ ಸ್ವಾತಂತ್ರ್ಯ ಜೀವಿ. ಕೊನೆಯವರೆಗೂ ಹೀಗೇ ಇರುತ್ತಾಳೆಂದು ನಂಬುವುದು ಕಷ್ಟ. ಇತ್ಯಾದಿ. ಇತ್ಯಾದಿ.

* * * *

ಜೀವನವೇನೋ ಸುಖಮಯ, ದಿನಗಳೂ ಸರಾಗವಾಗಿ ಓಡುತ್ತವೆ. ಬೆಳಗಿನ ಸುಪ್ರಭಾತ ಎಂದಿನಂತೆಯೇ ಸುಖಾನಂದಮಯ. ದುರ್ವ್ಯಸನಗಳು ಮೈಲಿಮೈಲಿ ದೂರ. ಆದರೂ.....ಏನೋ ಒಂದು ಬಗೆಯ–ಯೋಚಿಸಿದರೂ ಊಹಿಸಲಾಗದ ಕಿರುಮನದ ಕಿಂಡಿಯಲ್ಲಿ ಕೂರ್ಮುಳ್ಳೊಂದು ಚುಚ್ಚುತ್ತಲೇ ಇರುತ್ತದೆ. ಪುರುಷ ಸಹಜವಾದ ಈರ್ಷ್ಯಾಪೌರುಷಗಳನ್ನು ಮೀರಿ.

ಸುಧೀರ್ ಬೆಳಗ್ಗೆ ಕೆಲಸಕ್ಕೆ ಹೊರಡುವ ಮುನ್ನ ಅಂದ,

"ನಿರ್ಮ್ಮಿ ಮೈ ಲವ್! ಇಂದು ಈವ್ನಿಂಗ್ ಷೋಗೆ ಹೋಗೋಣವೇ?"

ನಿರ್ಮಲ ಸ್ವಲ್ಪ ಯೋಚಿಸಿ ನುಡಿದಳು "ಈ ದಿನ ಆಗುತ್ತೋ ಇಲ್ಲವೋ, ನಾಡಿದ್ದು ಶನಿವಾರ ಸಂಜೆ ಹೋಗೋಣವೇ?"

"ಶನಿವಾರ ನನಗೊಂದು ಮೀಟಿಂಗ್ ಇದೆ."

"ನಾನು ಯಾವುದಕ್ಕೂ ಮಧ್ಯಾಹ್ನ ರಿಂಗ್ ಮಾಡುವೆ."

"ಖಂಡಿತ ಮಿಸ್ ಮಾಡಬೇಡ, ಆಯಿತೇ?" ದನಿ ಎದೆಯಾಳದಿಂದ ಹೊರಬಿತ್ತು.

"O.k. ಸುಧೀ...." ಅಷ್ಟೇ ನಿರಾಳವಾಗಿ ಉತ್ತರಿಸಿದಳು ನಿರ್ಮಲ.

ಪರಸ್ಪರ ಬೀಳ್ಕೊಡಿಗೆಯ ಮುಗುಳ್ನಗೆ ಆನಂದದ ಸವಿ ಸೂಸಿ ಎರಡೂ ಮುಖಬಿಂಬ ಪ್ರಸನ್ನವಾದುವು. ಹಿಂದಿನಿಂದ ಅವನು ಕಣ್ಮರೆಯಾಗುವವರೆಗೂ ನಯನದ್ವಯಗಳು ನಿಟ್ಟಿಸಿದುವು. ಅವನ ಆಂತರಿಕ ರೀತಿಯನ್ನೆ ಅರಿತುಕೊಳ್ಳಲಾರೆನಲ್ಲ ಎಂದು ಕೊರಗಿತು ಮನಸ್ಸು.

ನಿರ್ಮಲ ಆಫೀಸಿಗೆ ಹೋದಾಗಲೇ ರಫ್ತು ಮಾಡಿಸುವುದಕ್ಕಾಗಿ ಅನೇಕ ಮಂದಿ ನೆರೆದಿದ್ದಾರೆ. ವಿದೇಶಗಳಿಗೆ ರಫ್ತುಗಾರಿಕೆ ತನ್ನ ಕೈಯಲ್ಲೇ ಇದ್ದುದರಿಂದ ಗಿರಾಕಿಗಳು ಬಹಳ.

ವಿದೇಶಗಳಿಂದ ಕೊಳ್ಳುವವರೂ ಬರುತ್ತಾರೆ. ಎಲ್ಲರೊಂದಿಗೂ ವ್ಯವಹಾರ, ಕೆಲಸ....ಕೆಲಸ ಎಷ್ಟು ಮಾಡಿದರೂ ಮುಗಿಯದ ಕೆಲಸ. ವಿವಿಧ ಪ್ರಕಾರಗಳ ವಸ್ತ್ರಗಳ ರಫ್ತುಗಾರಿಕೆಯ ಮುನ್ನ ಅವುಗಳ ಗುಣಾವಗುಣಗಳನ್ನೂ ಪರಿಶೀಲಿಸಬೇಕು. ಅನಂತರ ಮಾರಾಟದ ಮಾಹಿತಿ, ಮತ್ತು ಲೆಕ್ಕಾಚಾರ ಇಂತಿಂತಹ ಕೆಲಸಗಳ ರಾಶಿರಾಶಿ.

ಎಷ್ಟೋ ಸಲಿ ನನಗೆ ಮಾತಾಡಿಯೇ ಗಂಟಲೊಣಗುತ್ತೆ ಎಂದು ಕೊಳ್ಳುತ್ತಾಳೆ ನಿರ್ಮಲ. ಜಗ್ಗಿನ ತಣ್ಣನೆಯ ನೀರು ಖಾಲಿಯಾಗುತ್ತಲೇ ಇರುತ್ತದೆ. ಸೇವಕ ತಂದು ತುಂಬುತ್ತಿರುತ್ತಾನೆ. ಮನೆ ಹತ್ತಿರವಾದರೂ ಎಷ್ಟೋ ಸಲಿ ಊಟಕ್ಕೆ ಹೋಗಲೂ ಬಿಡುವು ದೊರೆಯದು. ಯಾರೋ ಇಶರೆ ಫ್ಯಾಕ್ಟರಿಗೆ ಕರೆದೊಯ್ಯುತ್ತಾರೆ. ಅಲ್ಲಿಯೇ ಎಲ್ಲಾದರೂ ಊಟ ಮಾಡುವ ಸಂದರ್ಭ ಒದಗುತ್ತದೆ. ಸಂಜೆ ಮನೆಗೆ ಬರುವಷ್ಟರಲ್ಲಿ ಬಳಲಿಕೆ-ಆಯಾಸ ತುಂಬಿರುತ್ತದೆ. ಮುಖಮಜ್ಜನಾನಂತರ ಅರ್ಧಗಂಟೆಯಾದರೂ ಹಾಸಿಗೆಯಲ್ಲಿ ಮೈಚಾಚದಿದ್ದರೆ ಸಾಧ್ಯವೇ ಇಲ್ಲ. ನಿರ್ಮಲ ಹಾಸಿಗೆ ಸೇರಿದಾಗಲೇ ಗಂಟೆ ಬಾರಿಸಿತು ಗೋಡೆಯ ಮೇಲಿನ ಗಡಿಯಾರ.

ಢಣ್. ಢಣ್. ಢಣ್. ಢಣ್. ಢಣ್. ಢಣ್.

* * * *

ಸುಧೀರ್ ಪಾದರಕ್ಷೆಗಳ ಪಟ ಪಟ ಸದ್ದು ಮಾಡುತ್ತ ಒಳಬಂದ. ಮುಖಬಿಂಬದಲ್ಲಿ ತೀವ್ರ ಅಸಮಾಧಾನವೋ ಆಯಾಸವೋ ಕಿನಿಸಿಗೆಂಪೋ ಅಥವಾ ಮತ್ತಾವುದೋ ದಟ್ಟವಾಗಿ ಕವಿದಿತ್ತು. ಯೋಚಿಸಿದರೂ ಅರ್ಥವಾಗದ ಘನ ಗಾಂಭೀರ್ಯದ ವಿನೂತನ ಶೈಲಿ.....

"ಏಕೆ ಸುಧೀರ್? ಏನೋ ಒಂದು ರೀತಿಯಾಗಿದ್ದೀರಿ? ತಲೆ ನೋವೇ? ಹುಷಾರಿಲ್ಲವೇ?" ಕೇಳಿದಳು ನಿರ್ಮಲ ಹಾಸಿಗೆಯಿಂದಲೇ ಆತಂಕಿತ ವಾಣಿಯಲ್ಲಿ.

ಅವನು ಅತ್ಯಂತ ಅಸಮಾಧಾನದಿಂದ ಉತ್ತರಿಸಿದ "ನೀನು ನನ್ನ ಎದೆಗೆ ಕಿಚ್ಚು ಹಚ್ಚಿದ್ದಿ!"

"ಅಂದರೆ.,....? ಏನಂತಹ ತೊಂದರೆಯಾದುದು ನಿಮಗೆ?" ಆಶ್ಚರ್ಯಚಕಿತ ದೃಷ್ಟಿ ವಿಸ್ತೃತವಾಯಿತು.

"ಮಧ್ಯಾಹ್ನ ತುಂಬಾ ಪ್ರಯತ್ನಿಸಿದೆ. ನಿಮ್ಮ ಫೋನಿನ ಸಂಪರ್ಕ ದೊರೆಯಲಿಲ್ಲ. ಅದಕ್ಕೇಕೆ ಅಸಮಾಧಾನ?"

"ನೀನು ಮಾಡಲಿಲ್ಲದೆಂದು ನಾನೇ ಮಾಡಿದೆ ನೀನು ಸೀಟಿನಲ್ಲಿರಲಿಲ್ಲ."

"ವಿದೇಶೀ ಗಿರಾಕಿಗಳು ಬಂದುದರಿಂದ ಅವರೊಂದಿಗೆ ಫ್ಯಾಕ್ಟರಿಗೆ ಹೋಗಿದ್ದೆ."

"ಪರಕೀಯರೊಂದಿಗೆ ಅಲೆಯುವಾಗ ಈ ಬಡಪಾಯಿ ನೆನಪು ಎಲ್ಲಿ ಬರಬೇಕು? ಇಲ್ಲಿ ನನ್ನೊಂದಿಗೆ ಇದೆಲ್ಲಾ...." ಮಾತು ಅಲ್ಲಿಗೆ ತುಂಡು ಗಡಿಯಿತು. ಅವನು ಬುಸುಗುಟ್ಟಿದ.

"ಛಿಃ! ಛಿಃ! ನಿಮಗೆ ನನ್ನ ಕಷ್ಟ ಅರ್ಥವಾಗುವುದೇ ಇಲ್ಲ ಬಿಡಿ!"

"ಮೊದಲು ನನ್ನ ಕಷ್ಟವನ್ನು ಅರ್ಥ ಮಾಡಿಕೊ ಅನಂತರ ಎಲ್ಲಾ...."

ಅವನು ದಡದಡನೆ ಶೌಚಾಲಯಕ್ಕೆ ಹೋಗಿ ಮುಖಮಜ್ಜನ ಮಾಡಿ ಹೊರಟ.

"ಈಗ ಚಹ ತೆಗೆದುಕೊಂಡರಾಯಿತು. ಸಿಟ್ಟು ಸೊಗಡು ಇರಲಿ!"

"ಎಲ್ಲಾ...ಆಗಿದೆ."

ಅವನು ತಿರುಗಿ ನೋಡದೆ ಹೊರಟ. ಅವಳು ಶಿಲಾ ಪ್ರತಿಮೆಯಂತೆ ನಿಂತು ಅವನ ನಿರ್ಗಮನವನ್ನು ಎವೆಯಿಕ್ಕದೆ ನೋಡಿದಳು. ರಾತ್ರಿಗೆ ಬರುತ್ತಾನೋ ಇಲ್ಲವೋ ಅವನ ವಿಚಿತ್ರ ರೀತಿಯಲ್ಲಿ ಕೇಳಲಿಕ್ಕೂ ಆಗಲಿಲ್ಲ ಎಂದುಕೊಂಡಾಗಲೇ ಅಡಿಗೆಯ ಸುಂದರಿ ಚಹ ಸಿಹಿ ಕಾರಗಳ ಟ್ರೇ ಸಹಿತ ಬಂದು ಯಜಮಾನನ ನಿರ್ಗಮನವನ್ನು ಆಶ್ಚರ್ಯಚಕಿತಳಾಗಿ ನಿಟ್ಟಿಸಿದಳು.

"ಅವರಿಗಿಂದು ಮೀಟಿಂಗ್ ಇತ್ತು ಸುಂದರಿ. ನಾನೇ ಮರೆತು ಬಿಟ್ಟಿದ್ದೆ." ಎಂದು ಅವಲಕ್ಷಣದ ಹಗರಣದ ಮೇಲೆ ಬೆಳ್ಳಿಯ ಮುಸುಕೆಳೆದು ಬರೀ ಚಹವನ್ನು ತೆಗೆದುಕೊಂಡು ಕೈಗೊಂದು ಪತ್ರಿಕೆ ಹಿಡಿದಳು. ಅದರ ಪುಟಪುಟವನ್ನು ಓದಿದರೂ ವಿಷಯ ಗ್ರಹಣ ಮಾಡಲಿಲ್ಲ ಮನಸ್ಸು. ಹೀಗಾದರೆ ಮುಂದೇನು? ಎಂಬ ಪ್ರಶ್ನೆ ಗುಂಗೆ ಹುಳುವಿನಂತೆ ಕೊರೆಯುತಿತ್ತು ಮನವನ್ನು.

ರಾತ್ರಿ ಗಡಿಯಾರದ ಮುಳ್ಳು ಹತ್ತರ ಅಂಕೆಯನ್ನು ದಾಟಿದರೂ ಸುಧೀರನ ಸುಳಿವಿಲ್ಲ. ನೋಡಿ ನೋಡಿ ಹತ್ತೂವರೆಗೆ ಊಟದ ಶಾಸ್ತ್ರ ಮುಗಿಸಿ ಹಾಸಿಗೆ ಸೇರಿದಳು ನಿರ್ಮಲ. ದೀಪ ಉರಿಯುತ್ತಲೇ ಇದೆ. ಅಶಾಂತಿಯಿಂದ ನಿದ್ದೆ ಗಾವುದ ದೂರ. ಸಣ್ಣಗೆ ತಲೆ ನೋಯುತ್ತಿದ್ದುದರಿಂದ ಓದುವುದೂ ಬೇಡ. ದೃಷ್ಟಿ ಕಿಟಕಿಯಲ್ಲಿ ತೂರಿ ದೂರದಿಗಂತದಲ್ಲಿ ಹರಿದಿತ್ತು. ನೀಲಾಕಾಶದಲ್ಲಿ ಉಜ್ವಲ ನಕ್ಷತ್ರಗಳ ಮೋಹಕ ಚಿತ್ರ.

ಆಗಾಗ ಭರ್ರನೆ ಕಿಟಕಿಯಲ್ಲಿ ನುಗ್ಗಿ ಬರುತ್ತದೆ ತಂಗಾಳಿ. ನಾಯಿ-ಬ್ರೌನಿ ಬೊಗಳುತ್ತಲೇ ಇದೆ. ಸೇವಕ ಅದರ ತಲೆತಟ್ಟಿ ಸ್ವಾಂತನಗೊಳಿಸಿದ್ದ ಕೂಡ. ಆದರೂ ಅದಕ್ಕೆ ಸಮಾಧಾನ ಮಾಡಿರಲಿಲ್ಲವೇನೋ ಬೊಗಳುತ್ತಲೇ ಇತ್ತು.

* * * *

ಸುಧೀರನ ಕಾರು ಬಾಗಿಲಿಗೆ ಜರ್ರನೆ ಹರಿದುಬಂದಾಗ ಅದು ತನ್ನ ಎದೆಯ ಮೇಲೆಯೇ ಹರಿದಂತಾಯಿತು ನಿರ್ಮಲೆಗೆ. ನೋಟ ತಕ್ಷಣ ಗಡಿಯಾರದ ಕಡೆ ಹರಿಯಿತು. ಹನ್ನೆರಡು ಗಂಟೆ. ಮಧ್ಯರಾತ್ರಿ. ಎಲ್ಲೆಡೆಯೂ ನಿಶ್ಯಬ್ದ ಶಾಂತಿಯ ಅವತರಣ.

ಸುಧೀರ್ ದಡದಡನೆ ಮೆಟ್ಟಲು ಹತ್ತಿ ಒಳಬಂದ. ಲಿಕ್ಕರಿನ ವಾಸನೆ ಮೊದಲೇ ನುಗ್ಗಿಬಂತು. ಅದುವರೆಗೆ ಅಲ್ಪಸ್ವಲ್ಪ ತೆಗೆದುಕೊಳ್ಳುತಿದ್ದ ಅವನು ಇಂದು ಪಾನಮತ್ತನಾಗಿ ಬಂದಿದ್ದಾನೆ. ನಿರ್ಮಲೆ ಅವನ ಮುಖವನ್ನು ನೋಡಲಾರದೇ ನೋಡಿ ಕೇಳಿದಳು "ಏಕೆ ಇಷ್ಟೊತ್ತು ?"

ಅವನು ತೊದಲಿದ "ನನ್ನ ಬಾಲ್ಯದ ಗೆಳೆಯ ಶಂಕರ್ ಸಿಕ್ಕಿದ್ದ....."

ಸಧ್ಯ ಸಮಾಧಾನದಿಂದ ಮಾತನಾಡಿದುದು ಸಾಕಾಗಿತ್ತು ನಿರ್ಮಲೆಗೆ.

ಅವನು ಶೌಚಾಲಯಕ್ಕೆ ಹೋದವನೇ ವಾಂತಿ ಮಾಡಿದ. ಉಂಡ ಆಹಾರವೆಲ್ಲಾ ವಾಂತಿಯಾಯಿತು. ಹೊಸ್ತಿಲು ದಾಟುವುದರೊಳಗೇ ವಾಂತಿ ಮಾದುದರಿಂದ ಇಡೀ ನೆಲವನ್ನು ಆಕ್ರಮಿಸಿತು ವಮನರಾಶಿ. ದುರ್ಗಂಧ..... ತಡೆಯಲಾಗದ ದುರ್ಗಂಧ. ಶುಚಿಗೊಳಿಸದೆ ವಿಧಿಯಿರಲಿಲ್ಲ. ನಲ್ಲಿಯಲ್ಲಿ ನೀರು ಬರುತಿದ್ದರೂ ಸಣ್ಣ ಕ್ಷೀಣಿತಧಾರೆ. ಅಷ್ಟರಲ್ಲೇ ಪೂರೈಸಬೇಕಾದರೆ ಅರ್ಧಗಂಟೆಗೂ ಮೇಲೆ ಹಿಡಿಯಿತು. ಆ ದುರ್ವಾಸನೆ ತಾಳಲಾರದೆ ತನಗೂ ವಾಂತಿ ಬರುವಂತೆ ಒಡಲಲ್ಲಿ ತಳಮಳಿಸಿದಳು ನಿರ್ಮಲ.

"ಸಾರಿ ನಿಮ್ಮಿ! ಶಂಕರ್ ನನ್ನ ಲೋಟಿಗೆ ಬಗ್ಗಿಸುತಿದ್ದನ್ನು ನಾನು ಗಮನಿಸದಿದ್ದುದು ತಪ್ಪಾಗಿದೆ ಅಷ್ಟೆ. ನಾನು ಯಾವಾಗಲೂ ಇತಿಮಿತಿಯೊಳಗೇ ಇರುವವ. ಮುಂದೆಯೂ ಹಾಗೆಯೇ ಅಂದುಕೊ."

ಅವಳ ಮೌನಧಾರಣೆಯೇ ಉತ್ತರವಾಯಿತು.

ಕೈಕಾಲನ್ನು ಸೋಪು ಹಾಕಿ ತೊಳೆದುಕೊಂಡೇ ಒಳಬಂದಿದ್ದಾಳೆ.

ಆದರೂ, ಆ ವಾಸನೆಯು ಮುಗುಟು ಹೋಗಿಯೇ ಇಲ್ಲ ಎಂಬಷ್ಟು ಮಾನಸಿ
ಹಿಂಸೆ. ಅವನ ಬಾಯಿಯಿಂದ ಇನ್ನೂ ವಾಸನೆ ಹೊಮ್ಮುತ್ತಲೇ ಇದೆ
ಆದಷ್ಟು ದೂರವಿರೋಣವೆಂದರೆ ಕಾಮದ ಹುಲಿಯಾಗಿದ್ದ ಅವನ
ಒಮ್ಮೆಲೇ ಆಕ್ರಮಿಸಿದ. ಹಾ, ಮಾನಸಿಕ ಹಿಂಸೆ. ಆತ್ಮಿಕ ಹಿಂಸೆ.

* * * *

"ನಿನ್ನ ಸುತ್ತಮುತ್ತ ಯಾವಾಗ ನೋಡಿದರೂ ಹುಡುಗರು! ಯಾಕ
ಅಷ್ಟು ಮಂದಿಯನ್ನು ಸೇರಿಸಿಕೊಳ್ಳುತ್ತಿ?" ರೇಜನಿಂದ ಕೇಳಿದ ಸುಧೀರ್
ಕಣ್ಣುಗಳು ಕೋಪದ ಕಿಡಿ ಕಾರಿದುವು.

"ರಫ್ತು ವ್ಯಾಪಾರ ಅಂದರೆ ಸಾಮಾನ್ಯವೇ? ರಫ್ತು ಮಾಡುವವ
ರೆಲ್ಲಾ ಬಂದೇ ಬರುತ್ತಾರೆ. ಅದಕ್ಕೇಕೆ ಅಡ್ಡಿ?"

"ಎಲ್ಲಾದರಲ್ಲೂ ಇತಿಮಿತಿ ಇದ್ದರೆ ಒಳ್ಳೆಯದು!"

"ನಿಮ್ಮ ಆಫೀಸಿನಲ್ಲಿ ಕಾರ್ಯಾರ್ಥಿ ಜನ ಬರುವುದಿಲ್ಲವೇ?"

"ನಾನು ಗಂಡಸು! ಹೇಗಿದ್ದರೆ ತಾನೆ ಏನು? ಮನಮೋಹನ್
ಹತ್ತಿರ ನಿನ್ನ ಸ್ನೇಹ ಮಿತಿ ಮೀರಿದೆ! ನನಗೆ ಗೊತ್ತು. ಅವನ ಕಾರು
ಯಾವಾಗಲೂ ನಿನ್ನ ಆಫೀಸಿನ ಬಳಿ ನಿಂತಿರುತ್ತೆ. ದಿನಾ ಏನು ಕೆಲಸ
ಅವನಿಗೆ?"

"ಕೆಲಸಕ್ಕೋಸ್ಕರ ಬರುತ್ತಾನೆ. ಹೋಗುತ್ತಾನೆ. ಅವನ ಮೇಲೇಕೆ
ಸಂಶಯ ನಿಮಗೆ?"

"ಅತಿ ಆದರೆ ಗತಿಕೇಡು-ಮತಿಗೇಡು ಎಲ್ಲಾ ಆಗುತ್ತೆ. ಈಗ ನನ್ನ
ದುಡಿಮೆ ಇಬ್ಬರಿಗೂ ಸಾಕು. ನೀನು ಕೆಲಸ ಬಿಟ್ಟರೆ ಒಳ್ಳೇತು. ನನಗೆ
ದಿನವೂ ಇಷ್ಟು ದೂರ ಬಂದುಹೋಗುವುದು ಸಾಧ್ಯವಿಲ್ಲ. ನಾನಿನ್ನು ಸಿಟಿ
ಯಲ್ಲಿ ನೆಲಸುವವನೇ!"

ಅವನ ಮುಖ ಕಣ್ಣುಗಳಲ್ಲಿ ಹೊಮ್ಮುತ್ತಿದ್ದ ಕೋಪದ ಕಾವು ನಿಜ
ವಾಗಿಯೂ ಭಯಾನಕ. ನೋಡಲಾರದೇ ನೋಡಿದ ನಿರ್ಮಲೆಯ ಮೂಕ
ಮೌನವೇ ಉತ್ತರವಾಯ್ತು. ಮನಸ್ಸು ಚಿಂತಾಕ್ರಾಂತವಾಗಿ ದಿಗ್ಭ್ರಮೆ
ಹೊಂದಿತು.

"ಏನು ಹೇಳುತ್ತಿ?"

"ಮೊದಲು ಮನೆ ಮಾಡಿಕೊಳ್ಳಿ. ಅನಂತರ ಯೋಚಿಸೋಣ. ಬಾವಿ ಪಾತಾಳದಿಂದ ಹರಿದು ಬಂದಂತೆ ಹೊಮ್ಮಿತು ದನಿ, ಅಂತರಂಗ ವಿವರ್ಣವಾಗಿ ಥಟ್ಟನೆ ಮುಖಬಿಂಬ ಕಪ್ಪಿಟ್ಟಿತು.

ಅವನು ಆ ಕ್ಷಣವೇ ಹೊರಟ. ಪಟಪಟ ಸದ್ದು ಮಾಡಿದುವು ಪಾದರಕ್ಷೆಗಳು.

ನಿರ್ಮಲ ಆ ಧೂರ್ತನ ಅಪರವೇಶವನ್ನು ನೋಡಿ ನಿಟ್ಟುಸಿರು ಬಿಟ್ಟಳು. ಮನಸ್ಸು ಒಡೆದ ಕನ್ನಡಿ ಚೂರಾಗಿತ್ತು. ಮುಂದೇನು ? ಎಂಬ ಪ್ರಶ್ನೆ ತಲೆಯಲ್ಲಿ ನಿಮಿರಿ ನಿಂತಿದೆ. ಎದೆಯ ಹಕ್ಕಿ ಚೀರಿತು 'He is mad !'

ನಿರ್ಮಲಳ ನೋಟ ಗಡಿಯಾರದ ಕಡೆ ಹರಿಯಿತು. ಆಗಲೇ ಗಂಟೆ ಒಂಭತ್ತೂವರೆ. ಅವಸರಿಸಿ ಹೊರಟರೆ ಸ್ಟೇರಿಂಗ್ ಮೇಲೆ ಹತೋಟಿ ತಪ್ಪಿದಂತೆ ರಸ್ತೆಯ ತುಂಬ ಹರಿದಾಡುತ್ತಿದೆ ಕಾರು. ಆಗ ನಿಜಕ್ಕೂ ಭಯವಾಗಿ ಎಚ್ಚೆತ್ತುಕೊಂಡಳು. ಕಾರು ಸರಿದಾರಿಗೆ ಬಂತು. ಆಫೀಸಿನ ಬದಿಯಲ್ಲಿದ್ದ ಮರದ ನೆರಳಲ್ಲಿ ಕಾರನ್ನು ನಿಲ್ಲಿಸಿ ಮೆಟ್ಟಿಲು ಹತ್ತಿದಳು. ಅಲ್ಲಲ್ಲಿ ಮಾತುಕತೆಯಲ್ಲಿ ತೊಡಗಿದ್ದ ಗುಮಾಸ್ತರು ಟೈಪಿಸ್ಟ್‌ಗಳು ಹರಟೆ ನಿಲ್ಲಿಸಿ ತಮ್ಮತಮ್ಮ ಕೆಲಸಕ್ಕೆ ಗಮನಕೊಟ್ಟರು. ನಿರ್ಮಲ ಆಫೀಸಿಗೆ ಹೋಗಿ ಮೇಜಿನ ಮುಂದೆ ಕುಳಿತಾಗ ದೃಷ್ಟಿ ಬಲಭಾಗದ ಕಿಟಕಿಯ ಕಡೆಗೆ ಹರಿಯಿತು. ಸೀಬೆಯ ಮರದ ಮೇಲೆ ಮೈನಾ ಹಕ್ಕಿಗಳ ಜೋಡಿ! ಆಹ್ಹ ಎಂತಹ ಸುಂದರ ಚಿತ್ರ ? ಒಟ್ಟಾಗಿ ಕುಳಿತ ಅವು ಮೈಗೆ ಮೈಯೊತ್ತಿ ಮುಖವನ್ನು ಮುದ್ದಿಸುವಂತೆ ಪ್ರೀತಿಯಾಗರ ಗುರುಗುರು ದನಿಯನ್ನು ಆನಂದದಿಂದ ಹೊಮ್ಮಿಸುತ್ತಿವೆ.

ಎವೆಯಿಕ್ಕದ ನೋಟ ಅತ್ತ ನೋಡಿಯೇ ನೋಡಿತು. ಸೀಬೆಹಣ್ಣು ತಿಂದು ಹೊಟ್ಟೆ ತುಂಬಿಕೊಂಡ ಜೋಡಿ ಇತ್ತಲೇ ನೋಡಿ ನಗುವಂತೆ ಚೀಂಪೀ ಎಂದು ಚೀರಿದುವು.

ಆ ಸೀಬೆಯ ಗಿಡದ ತುಂಬೆಲ್ಲಾ ಪೀಚು ಹಣ್ಣು ಮಿಡಿಗಳ ಸಿಂಗರ. ಹಕ್ಕಿಗಳಿಗೆ ಅದೊಂದು ಸ್ವರ್ಗ ಸೀಮೆ. ಅದನ್ನು ನೋಡುತ್ತಿದ್ದಂತೆಯೇ ಯೋಚನೆ ತನ್ನೆಡೆಗೇ ಹರಿಯಿತು. ಸುಧೀರ್ ಚೆನ್ನಾಗಿದ್ದಿದ್ದರೆ....ಅಲ್ಲ ಸರಿಯಾಗಿದ್ದಿದ್ದರೆ ನನ್ನ ಜೀವನವೂ ಹಾಗೆಯೇ ಇರುತಿತ್ತು. ಭಗವಂತ ಜೀವನವನ್ನೂ ಕೊಟ್ಟ. ನರಕವನ್ನೂ ಕೊಟ್ಟ.....

ಬಾಗಿಲ ಬಳಿ ಕಟಕಟ ಸದ್ದು.

ದೃಷ್ಟಿ ಸಹಜವಾಗಿ ಅತ್ತ ಹರಿಯಿತು.

ಮನಮೋಹನ ಒಳ ಹೆಜ್ಜೆಯಿಟ್ಟ. ಅವನಿಗೆ ಮುಗುಳುನಗೆಯ ಸ್ವಾಗತ ನೀಡಿದರೂ ಅದು ಜಾಹೀರಾತಿಗೆ ಹರಿದಂತಹ ಕೃತಕ ನಗೆ. ಗಳಿಗೆಯಲ್ಲೇ ಅವನು ಅವಳ ಮನೋಭಾವವನ್ನು ಗಮನಿಸಿದನೇನೊ... ನೀರಸದನಿಯಲ್ಲಿ "ನಮಸ್ಕಾರ ಮೇಡಂ!" ಎಂದ ಅಮಿತಾಶ್ಚರ್ಯ ಮೂಟೆಯಾಗಿ. ಹಿಂದೆಯೇ ಅನೇಕ ಮಂದಿ ಒಳ ಹೆಜ್ಜೆಯಿಟ್ಟರು.

* * * *

"ಮೇಡಂ ! ಸುಧೀರ್ ಸಾಬ್ ಬರುತಿದ್ದಾರೆ."

ಜವಾನ ಒಳಬಂದು ಬಿತ್ತರಿಸಿದ.

ನಿರ್ಮಲ ಬಾಗಿಲ ಕಡೆಗೆ ದೃಷ್ಟಿ ಹೊರಳಿಸಿದಳು.

ಮನಮೋಹನ್ ಇನ್ನಿಬ್ಬರು ಉದ್ಯೋಗಿಗಳೊಂದಿಗೆ ಕುಳಿತಿದ್ದಾನೆ ತುಟಿಗಳಲ್ಲಿ ಆನಂದದ ಹೂನಗೆಯ ಹರವು. ಅರಳಿದ ಮುಖ.....

ಸುಧೀರನ ನೆಟ್ಟ ದೃಷ್ಟಿ ಒಂದು ಕ್ಷಣ-ಒಂದೇ ಒಂದು ಕ್ಷಣದಲ್ಲಿ ಎಲ್ಲ ವನ್ನೂ ಅಳೆಯಿತು.

ಮನಮೋಹನ್ ಎದ್ದು ನಿಂತು ತನ್ನ ಕುರ್ಚಿಯನ್ನು ತೆರವು ಮಾಡಿದ. ಸುಧೀರ್ ಕುಳಿತುಕೊಳ್ಳಲಿಚ್ಛಿಸದೆ ಹೇಳಿದ "ನಾನಿಂದು ನೇಪಾಳಕ್ಕೆ ಹೊರಡುವೆ. ಬರುವುದು ಒಂದು ವಾರವಾದೀತು."

ಅದಷ್ಟನ್ನು ಹೇಳಿ ಹೋಗುವುದಕ್ಕಾಗಿ ಅವನು ಬರಲಿಲ್ಲವೆಂಬುದು ಎಲ್ಲರಿಗೂ ಗೊತ್ತು.

ಅವಳು ಪ್ರಾಸಂಗಿಕವಾಗಿ ಕೇಳಿದಳು "ಮನೆಗೆ ಬಂದು ಹೋಗಲು ವಿರಷ್ಟೇ?"

"ಇಲ್ಲ ಮಧ್ಯಾಹ್ನವೇ ಹೊರಡುವೆ."

ಮನಮೋಹನ್ ಕಡೆ ಖಾರವಾಗಿ ನೋಡಿ ಅವನು ಹಿಂದಿರುಗಿದ. ಮೈಮನಗಳಲ್ಲೆಲ್ಲಾ ನಂಜಿನ ಝರಿ ಜರ್ರನೆ ಹರಿದಾಡಿತು. ದಡಬಡನೆ ಮೆಟ್ಟಲಿಳಿದು ಕಾರು ಹತ್ತಿದ. ಎದುರಿಗೆ ಮನಮೋಹನನ ಸಾಗರ ನೀಲಿ ವರ್ಣದ ಬೆಂಜ್ ಕಾರು. ಸಮವಸ್ತ್ರಭೂಷಿತನಾದ ಡ್ರೈವರ್. ಬೇಡ ವೆಂದರೂ ದೃಷ್ಟಿಗೆ ಬಿತ್ತು ಕಣ್ಣು ರಿಸುವ ಚಿತ್ರ.

ಅವನ ರೀತಿ-ನೀತಿ, ಕೋಪತಾಪಗಳಿಂದ ಬೇಸತ್ತಿದ್ದ ಅವಳು ಎದ್ದೇಳಲೂ ಇಲ್ಲ; ಕಾರಿನ ತನಕ ಹೋಗಲೂ ಇಲ್ಲ. ಸುಧೀರ್ ಕಾರು ಸ್ಟಾರ್ಟ್ ಮಾಡುವ ಮುನ್ನ ಇತ್ತ ಹೊರಳಿಸಿದ ಮಿಂಚಿನ ನೋಟಕ್ಕೆ ಮನಮೋಹನನ ನಗುಮುಖ ಕಂಡುಬಂತು. ಸೌಂದರ್ಯ ಮತ್ತು ಆನಂದಗಳ ರಸಪಾನದಿಂದ ಮೂಡಿದ ವ್ಯಕ್ತಿ.

ಹಾ.....! ಹೃದಯ ಬನಕ್ಕೆ ಒಮ್ಮೆಲೇ ಕಿಚ್ಚು ಹಚ್ಚಿದಂತಾಯಿತು.

ಅವನ ಅಪ್ರೂಢ ಜೀವನಕ್ಕೆ ಮಾರುಹೋಗಿದ್ದಾಳೆ ನಿರ್ಮಲ. ಅವನ ಪ್ರವೇಶದಿಂದಲೇ ಅವಳಿಗೆ ನನ್ನಲ್ಲಿ ಗೌರವವಿಲ್ಲ. ಅವನು ತೊಲಗಿದಲ್ಲದೆ ನಮ್ಮ ಜೀವನದಲ್ಲಿ ನೆಮ್ಮದಿ ಮೂಡುವುದಿಲ್ಲ.....ಎಂದು ಸಣ್ಣ ಮನಸ್ಸು ಕೂಗಿ ಹೇಳಿತು. ಮತ್ತೆ ಮತ್ತೆ ಅದೇ ವ್ಯಾಖ್ಯಾನ. ಮೈಯ್ಯ ನೆತ್ತರೆಲ್ಲಾ ಬಿಸಿಗೊಂಡು ಬೆಂಕಿಯ ಝರಿಯಂತೆ ಹರಿದಾಡಿತು. ಸ್ಟೇರಿಂಗ್ ಮೇಲೆ ಹತೋಟಿ ತಪ್ಪಿದಂತೆ ಕಾರು ಅತ್ತಿತ್ತ ಹರಿದಾಡಿದಾಗ ಸುಧೀರ್ ಎಚ್ಚತ್ತುಕೊಂಡ. ಕಾರನ್ನು ತಹಬಂದಿಗೆ ತೆಗೆದುಕೊಂಡು ಸಿಟಿಯನ್ನು ಸೇರಿದ. ಮನಸ್ಸಾಗರ ಅಲ್ಲೋಲಕಲ್ಲೋಲವಾಯಿತು. ಕಾರನ್ನು ನಿಲ್ಲಿಸಿ ಒಳಹೋದ.

ಬೀರುವಿನಲ್ಲಿ ವಿದೇಶೀ ಮದ್ಯದ ಶೀಸೆಗಳು ಬರಿದಾದುವು. ಮನೆಗೆ ಹೊಸದಾಗಿ ಬಂದಿದ್ದ ಕೇರ್ ಟೇಕರ್ ಮನಸ್ಸು ಭಯಾಶ್ಚರ್ಯಗಳ ಹುಚ್ಚು ಹೊಳೆಯಲ್ಲಿ ಕೊಚ್ಚಿಹೋಯಿತು.

ನಿರ್ಮಲೆಯು ದೈನಂದಿನ ಮಾನಸಿಕಾಂದೋಳನವನ್ನು ಬದಿಗಿಟ್ಟು ಮೈಯೆಲ್ಲಾ ಕಣ್ಮನಗಳಾಗಿ ಕೆಲಸ ನಿರ್ವಹಿಸದಿದ್ದರೆ ಪ್ರಗತಿಗೆ ಧಕ್ಕೆ. ದೇಶವಿದೇಶಗಳಿಗೆ ದಿನದಿನಕ್ಕೂ ಹೆಚ್ಚುತ್ತಿರುವ ವೃತ್ತಿ-ರಫ್ತು ಯೋಜನೆ. ಆರೇಳು ವರ್ಷಗಳ ಅನುಭವ ಏನೇನೂ ಸಾಲದೇನೋ ಎನಿಸುವಷ್ಟು ಕ್ಲಿಷ್ಟತೆಯನ್ನೆದುರಿಸಬೇಕಾಗುತ್ತದೆ ಕೆಲವೊಮ್ಮೆ. ದಿನದಿನ ಉದ್ದಿಮೆಯ ರೂಪುರೇಷೆಗಳು ಹರಿಗೈ ಚಾಚಿ ಬೆಳೆಯುವುದರಿಂದ ಬೌದ್ಧಿಕ ಸ್ತರಕ್ಕೆ ವೃತ್ತಿಪ್ರವೃತ್ತಿಗಳು ಒಲೂ ಅಪ್ಯಾಯಮಾನ. ಅವಳು ಅದರಲ್ಲಿ ಸಂಪೂರ್ಣ ಮುಳುಗಿರುತ್ತಾಳೆ.

ಆದರೂ.....ಸುಧೀರನ ಇತ್ತೀಚಿನ ರೀತಿನೀತಿಗಳು, ಕೋಪತಾಪಗಳು ಮನವನ್ನು ಮುಳ್ಳಿನಂತೆ ಚುಚ್ಚಿ ಚುಚ್ಚಿ ಘಾಸಿ ಪಡಿಸುವುದರಿಂದ ಉತ್ಸಾಹಕ್ಕೆ ಲಗಾಮು. ಮದುವೆಯಾಗಿ ತಪ್ಪುಮಾಡಿದೆ ಎಂಬ ಕೊರಗು. ಮುಂದೇನು ? ಎಂಬ ಪ್ರಶ್ನೆ ತಲೆಯಲ್ಲಿ. ಯೋಚಿಸಿದಷ್ಟೂ ಕ್ಲೇಶ. ಸುಧೀರ್ ಮನೆಗೆ ಬಂದರೆ ಬಂದ. ಇಲ್ಲದಿದ್ದರೆ ಇಲ್ಲ. ಬಂದರೂ ಪ್ರೇಮಾನುರಾಗ ಮೈಲಿಮೈಲಿ ದೂರ.....ಏನೋ ಒಂದು ಬಗೆಯ ಯಾಂತ್ರಿಕ ಜೀವನ. ಇನ್ನೇನೋ ಒಂದು ಬಗೆಯ ಮಾನಸಿಕ ಹಿಂಸೆ. ಮತ್ತೇನೋ ಒಂದು ಬಗೆಯ ಅರ್ಥೈಸಲಾಗದ ಒಗಟು. ಎಲ್ಲವೂ ಒಗ್ಗೂಡಿ ಹೃತ್ ಕರಂಡವನ್ನು ಕೀಟದಂತೆ ಕೊರೆಯುತ್ತವೆ.....ದೀರ್ಘವಾದ ನಿಟ್ಟುಸಿರು ಬಿಟ್ಟು "ಹೀಗಾಗಬಾರದಿತ್ತು. ಎಷ್ಟುಕಾಲ ನಡೆಯುತ್ತೋ ನಡೆಯಲಿ ನಾನೇನೂ ಮಾಡಲಾರೆ" ಎಂಬ ನಿರ್ಧಾರಕ್ಕೆ ಮಣಿಯಿತು ಮನಸ್ಸು. ಆ ಕ್ಷಣವೇ ಗೋಡೆಯ ಮೇಲಿದ್ದ ಹಲ್ಲಿಯೊಂದು ನುಡಿಯಿತು ಚಕ. ಚಕ. ಚಕ. ಚಕ.

ನಿರ್ಮಲ ಹುಬ್ಬೆತ್ತಿ ನೋಡಿದಳು. ಹಲ್ಲಿ ಕಾಣಿಸಲಿಲ್ಲ.

ಸುಧೀರ್ ತೀರ ಕುಡಿತದ ಚಟ ಅಂಟಿಸಿಕೊಂಡಿದ್ದಾನೆಂಬುದು ಗೊತ್ತು. ಅದನ್ನು ಅವನೊಂದಿಗೆ ಚರ್ಚಿಸುವಂತೆಯೂ ಇಲ್ಲ, ಅವನ ಸ್ನೇಹಾನುರಾಗವೆಲ್ಲಾ ಅಂದಿಗೇ ಮುಗಿದು ಹೋಗಿದೆ. ಅವನ ಬದುಕಿನ ಪೂರ್ಣ ಪರಿಚಯ ಹೊಂದದೆ ಕೈಹಿಡಿದು ತಪ್ಪು ಮಾಡಿರುವೆ. ಅದನ್ನಿನ್ನು ಸರಿಪಡಿಸುವುದು ಸಾಧ್ಯವೇ ? ಏನು ಮಾಡಿದರೆ ಸರಿಹೋಗುತ್ತದೆ ?..... ಯೋಚನೆಯ ಚಕ್ರ ತಲೆಯಲ್ಲಿ ಸುಳಿ ಸುತ್ತುತ್ತಿದ್ದರೆ ಕೈಯಲ್ಲಿಯ ಲೇಖನಿ ಕುಂಟುವುದೂ ಕೂಡ ಗಮನಕ್ಕೆ ಬರುವುದಿಲ್ಲ. ಮನಸ್ಸು ಎಚ್ಚೆತ್ತುಕೊಂಡನಂತರ ಮುಂದಿನ ಕೆಲಸ.

* * * *

ಸುಧೀರ್ ದಡದಡನೆ ಒಳಬಂದ. ಅವನ ಪಾದಗಳ ರುದ್ರ ತಾಡನಗಳೇ ಕೋಪದ ಆಳವನ್ನು ತೋರಿದುವು. ನಿಲುವುಗನ್ನಡಿಯ ಮುಂದೆ ತಲೆ ಬಾಚಿಕೊಳ್ಳುತಿದ್ದ ಅವಳು ತಟ್ಟನೆ ತಿರುಗಿ ನೋಡಿದಳು. ಅವನ ಮುಖಮುದ್ರೆ ಕೆಂಪುಕಪ್ಪು ವರ್ಣಗಳ ಮಿಶ್ರಣವಾಗಿತ್ತು. ಕಣ್ಣುಗಳಲ್ಲಿ ಕಿಡಿ

ಗಳನ್ನು ಕಾರುತ್ತ ಅವನೆಂದ "ನಾನು ಸಿಟಿಯಲ್ಲಿ ಮನೆ ಮಾಡಿರುವೆ! ನೀನು ಹೊರಡು!"

"ನನಗಿಲ್ಲಿ ಅಭ್ಯಾಸವಾಗಿದೆ.....ಈಗಲೇ....ಬರ...."

ಆ ಕ್ಷಣವೇ ಕೋಪೋದ್ದೀಪ್ತನಾದ ಅವನು ಬಿಚ್ಚಿದ ಕೂದಲಿಡಿದು ಕೆನ್ನೆಯ ಮೇಲೆ ಫಳೀರನೆ ಬಾರಿಸಿ, ಬೂಟು ಕಾಲಿಂದ ಒದ್ದು ದಡದಡನೆ ಹೊರಟುಹೋದ. ಕೂಗಲು ಬಾಯ್ದೆರೆದರೆ ದನಿಯೇ ಹೊರಡಲಿಲ್ಲ. ಈಗಲೀಗ ಬಿರಿಯುವಂತೆ ವ್ಯಾಪ್ತಿಗೆ ಮೀರಿ ಮಿಡಿಯುತ್ತಿದೆ ಹೃದಯ. ಕೆಲವು ಕ್ಷಣ-ಕೆಲವು ಗಳಿಗೆ ಮನಃಪ್ರಾಣಗಳು ಸ್ತಬ್ಧವಾದಂತೆ ತೋರಿತು. ಸ್ತಂಭೀಭೂತಳಾಗಿ ತನ್ನನ್ನು ತಾನು ಹತೋಟಿಯಲ್ಲಿಟ್ಟುಕೊಳ್ಳಲು ಸರ್ವ ಸಾಹಸ ಪ್ರಯತ್ನಿಸಿದಳು ನಿರ್ಮಲ. ದೇಹದಾದ್ಯಂತ ಭಯಾಶ್ಚರ್ಯಗಳ ಝುರಿ ಜಗ್ರನೆ ಹರಿದಾಡಿತು. ಈ ದುಷ್ಟ ಧೂರ್ತನೊಂದಿಗೆ ಬಾಳಲಾರೆ ಎನಿಸಿ, ಒಳಹೋಗಿ ಹಾಸಿಗೆಯ ಮೇಲೆ ಬಿದ್ದುಕೊಂಡಳು. ಕಣ್ಣುಗಳಲ್ಲಿ ಕಂಬನಿಯ ಕೋಡಿ ಹರಿದುಹೋಯಿತು. ದುಃಖದುಗುಡುಗಳು ಘನೀಕರಿಸುತ್ತಿವೆ. ಮಾನಸಿಕ ಅಶಾಂತಿಯಿಂದಲೋ ಏನೋ ಹೊತ್ತು ದೀರ್ಘವಾಗಿ ಉರುಳುತ್ತಿರುವಂತೆ ಭಾಸವಾಯಿತು. ಆಫೀಸಿಗೆ ಎರಡು ದಿನಗಳ ರಜೆಗೆ ಬರೆದು ಕಳುಹಿಸಿದಳು.

ಮಧ್ಯಾಹ್ನ ನಾಲ್ಕರ ಸಮಯ.

ಟ್ರಿಣ್. ಟ್ರಿಣ್. ಟ್ರಿಣ್. ಟ್ರಿಣ್.

ನಿರ್ಮಲ ವ್ಯಾಕುಲತೆಯಿಂದಲೇ ಮೌತ್‌ಪೀಸ್ ತೆಗೆದುಕೊಂಡಳು.

"ಹಲೋ....?"

ಪರ್ಸನಲ್ ಮೇನೇಜರ್ ಆರ್ತದನಿಯಲ್ಲಿ ಬಿತ್ತರಿಸಿದ,

"ಮೇಡಂ! ಇಲ್ಲೊಂದು ಪ್ರಮಾದ!!"

"ಏನು? ಏನಾಯ್ತು??"

"ಮನಮೋಹನ್ ಇಲ್ಲಿಂದ ಹೊರಹೋಗುತಿದ್ದಾಗಲೇ ಕಾರಿನಲ್ಲಿ ಬಂದ ಯಾರೋ ದುರಾತ್ಮ ಅವರೆಡೆಗೆ ಗುಂಡುಹಾರಿಸಿ ಪರಾರಿಯಾದ. ಹಣೆಗೆ ಬಿದ್ದ ಪೆಟ್ಟಿನಿಂದ ಆ ಕ್ಷಣವೇ ಮೆಟ್ಟಿಲಿನ ಮೇಲೆ ಬಿದ್ದು ಪ್ರಾಣ ಬಿಟ್ಟರು ಮನಮೋಹನ್! ಛೀ! ಬಹಳ ಅನ್ಯಾಯ!"

ನಿರ್ಮಲೆಯ ಮನವನ್ನು ಇನ್ನಿಷ್ಟು ಪರಿತಾಪ ಆವರಿಸಿತು ಒಮ್ಮೆಲೇ ಸಿಡಿಲೆರಗಿದಂತೆ ಒದಗಿದ ಸುದ್ದಿಯಿಂದ. ಕೊಲೆಗಾರ ಯಾ ರಬಹುದೆಂಬುದನ್ನು ಊಹಿಸಲಾರದೇ ತತ್ತರಿಸಿತು ಮನಃಬುದ್ಧಿ. ಕಿಟಕಿ ಯಲ್ಲಿ ತೂರಿದ ದೃಷ್ಟಿ ದೂರ ದಿಗಂತದಲ್ಲಿ ನೆಟ್ಟಿತು. ವಿಶ್ವಪ್ರಪಂಚದ ಎದುರಿನಲ್ಲಿ ಭಾವನೆಗಳು ಕ್ಷಣಕ್ಷಣಕ್ಕೂ ಮಂಕಾಗತೊಡಗಿದುವು. ಕಲ್ಲು ಹೊತ್ತಂತೆ ಹೃದಯ ಭಾರಾತಿಭಾರ. ಲಿಖಿತ ಚಿತ್ರದಂತೆ-ಶಿಲಾಮೂರ್ತಿ ಯಂತೆ ಕುಳಿತುಬಿಟ್ಟಳು.

ಮರುದಿನ ಪತ್ರಿಕಾ ವರದಿಯಲ್ಲಿ ಮನಮೋಹನನ ಕೊಲೆಯ ವಿಚಾರ ತಿಳಿದುಬಂದದ್ದು ಹೀಗೆ. ಆ ಕೊಲೆಗಾರ ಕಪಿಲೇಶ್ವರ್ ವೀವಿಂಗ್ ಫ್ಯಾಕ್ಟ ರಿಯ ಅಸಿಸ್ಟೆಂಟ್ ಮ್ಯಾನೇಜಿಂಗ್ ಡೈರೆಕ್ಟರ್ ನಿರ್ಮಲಾರವರ ಪತಿ ಸುಧೀರ್ ಎಂಬುದಾಗಿ ತಿಳಿದುಬಂದಿದೆ....

ಆ ಕ್ಷಣವೇ ಕೈಯಿಂದ ಜಾರಿತು ಪತ್ರಿಕೆ.



# ಕಲೆಗಾಗಿ ಬದುಕು

He that can have patience gain what he will

ಮಧ್ಯಾಹ್ನ ನಾಲ್ಕರ ಸಮಯ....

ಎಂಟನೆಯ ತರಗತಿಯ ಪರೀಕ್ಷೆ ಮುಗಿಸಿಕೊಂಡು ಮನೆಗೆ ಬಂದೆ.

ಅಕ್ಕಿ ಆರಿಸುತಿದ್ದ ಅಮ್ಮ ಕದ ತೆಗೆದರು. ಕೊನೆಯ ಮಗು ಹರೀಶ ಹುಟ್ಟಿದಾಗ ಅವರ ಆರೋಗ್ಯ ತುಂಬಾ ಕೆಟ್ಟಿತು. ನಂತರ ಅವರು ಅಷ್ಟಾಗಿ ಸುಧಾರಿಸಿಕೊಳ್ಳಲಿಲ್ಲ. ಮುಖದಲ್ಲಿ ಆರೋಗ್ಯದ ಕಳೆಯೇ ಇರಲಿಲ್ಲ. ಕೆನ್ನೆಗಳಲ್ಲಿ ಸುಕ್ಕು. ಕಣ್ಣುಗಳ ಕೆಳಗೆ ಊತ. ಹಳದಿ ಮಿಶ್ರಿತ ಬಣ್ಣ. ನಿತ್ಯ ಆಯಾಸದ ಪಾಲು. ಒಟ್ಟಿನಲ್ಲಿ ಅವರದು ದಯನೀಯವಾದ ಚಿತ್ರ. ನಾನು ಮುಖ ಮಜ್ಜನ ಮಾಡಿದನಂತರ ಅವರ ಕೆಲಸದಲ್ಲಿ ಪಾಲ್ಗೊಂಡೆ.

"ಹೇಗೆ ಮಾಡಿದ್ದಿ ಪರೀಕ್ಷೆಯಲ್ಲಿ ?" ಕೇಳಿದರು ಅಮ್ಮ.

"ಚೆನ್ನಾಗಿ ಮಾಡಿರುವೆ."

ನನ್ನ ಧ್ವನಿಯಲ್ಲಿ ಮೊಳಗಿದ ಉತ್ಸಾಹವನ್ನು ಗಮನಿಸಿ ಅವರೆಂದರು "ನೀನು ಪಾಸಾದರೂ ಒಂದೇ. ಬಿಟ್ಟರೂ ಒಂದೇ. ಇನ್ನು ಮುಂದೆ ನಿನ್ನ ಓದಿಸುತ್ತಾರೆಂಬುದು ಕನಸಿನ ಮಾತು. ಮೂರು ಜನ ಗಂಡು ಮಕ್ಕಳನ್ನು ಓದಿಸಿ ದಡ ಹಚ್ಚಿದರೆ ಅವರಿಗೆ ಸಾಕಾಗಿದೆ" ಎಂದರು ಅಮ್ಮ. ಧನಿಯಲ್ಲಿ ನಿರಾಸೆಯ ಝುರಿಯೇ ಹರಿದು ಬಂತು.

"ಹಾಗೆಂದರೆ ಹೇಗಮ್ಮಾ? ನೀವು ಕಾಸಿಲ್ಲದೆ ಗೋಳಾಡುವುದನ್ನು ನೋಡಿದರೆ ನನಗೆ ಈ ಬಗೆಯ ಜೀವನ ಬೇಡವೇಬೇಡ ಎನ್ನಿಸುತ್ತಿದೆ.

ಸ್ಕೂಲು ಎಜುಕೇಶನ್ ಮುಗಿದನಂತರ ಟೀಚರ್ ಟ್ರೈನಿಂಗ್ ತೆಗೆದು ಕೊಂಡರೆ ನನ್ನ ಖರ್ಚು ನಾನು ನೋಡಿಕೊಳ್ಳುವೆ."

"ಇನ್ನೂ ಮೂರು ನಾಲ್ಕು ವರ್ಷ ಮಗಳೇ!" ದನಿ ಎದೆಯಾಳದಿಂದ ಹರಿದು ಬಂತು.

"ಹೌದಮ್ಮಾ."

"ಅವರು ಒಪ್ಪುವುದು ಕಷ್ಟ. ನನ್ನ ಕೈಲೂ ಮನೆ ಕೆಲಸ ಸಾಗದು. ಏನಾಗುತ್ತೋ ದೇವರಿಗೆ ಗೊತ್ತು." ನಿಟ್ಟುಸಿರು ಬಿಟ್ಟರು ಅಮ್ಮ. ಮುಖದ ವರ್ಚಸ್ಸು ಇಳಿದು ಹೋಯಿತು.

"ಅಮ್ಮಾ....!" ಅಳು ದನಿಯಲ್ಲಿ ಗೋಗರೆದೆ ನಾನು. ಒಡಲ ಸಂಕಟ ತಾಳಲಾಗದೆ.

"ನನ್ನಿಂದೇನಾದೀತು ಹೇಳು? ನಿನ್ನಪ್ಪ 'ಹೂಂ' ಎಂದರೆ ಆಗುತ್ತೆ."

"ಮೂರು ಮಂದಿ ಗಂಡು ಮಕ್ಕಳನ್ನು ಓದಿಸುವವರಿಗೆ ಒಬ್ಬ ಮಗಳು ಏನು ಭಾರ ಹೇಳಿ?"

"ಅಪ್ಪನನ್ನೇ ಕೇಳು!" ನುಡಿದರು ಅಮ್ಮ. ನಿಸ್ಸಹಾಯಕತೆಯಿಂದ.

"ಹೆಣ್ಣಾಗಿ ಹುಟ್ಟಬಾರದು ಬಿಡಿ."

ಆ ತಾಯಿಯ ಬಾಯಿಯಲ್ಲಿ ಮಾತೇ ಹೊರಡಲಿಲ್ಲ. ನನ್ನ ಹೃದಯ ವನ್ನು ಕಾಣದ ಕೈಗಳು ಹಿಸುಕಿದುವು. ನಾನು ಅತ್ಯಂತ ನಿರಾಶಳಾದೆ; ನರನರಗಳೂ ನರಳುವಷ್ಟು ವ್ಯಸನ ಭಾರ ಮೂಡಿತು ಮನದಲ್ಲಿ.

* * * *

ನನಗೆ ಚಿತ್ರಕಲೆಯಲ್ಲಿ ಅತಿಯಾದ ಪ್ರೇಮ-ಹುಚ್ಚು-ಹುಟ್ಟು ಕಲೆ ಏನಾದರೂ ಅನ್ನಬಹುದು. ಅದಕ್ಕೆ ಬೇಕಾಗುವ ಕಾಗದ-ಬಣ್ಣ ಇವು ಗಳನ್ನು ಕೊಳ್ಳಲು ಕಾಸಿದ್ದರಷ್ಟೆ? ಅಪ್ಪನನ್ನು ಕೇಳುವುದೆಂದರೆ ಬಾಗಿಲ ಮರೆಗೆ ನಿಲ್ಲಬೇಕು. ಈ ಗೋಳು ಯಾರಿಗೆ ಬೇಕು? ಎಷ್ಟೋ ಸಲಿ ಗೆಳ ತಿಯರೊಂದಿಗೆ ಬೇಡಿ ಬಣ್ಣದ ಪೆನ್ಸಿಲ್‌ಗಳನ್ನು ತರುತಿದ್ದೆ. ಅವುಗಳಿಂದ ಎಷ್ಟೋ ಚಿತ್ರಗಳು ತಯಾರಾದುವು. ಆದರೆ, ಅವನ್ನು ಅಣ್ಣಂದಿರಾಗಲೀ, ಅಮ್ಮ, ಅಪ್ಪಂದಿರಾಗಲೀ, ತಮ್ಮನಾಗಲೀ, ಮೆಚ್ಚುವುದಿರಲಿ; ಅಸಡ್ಡೆ, ತಿರಸ್ಕಾರಗಳಿಂದ ನೋಡಿ ಮೂಗು ಮುರಿದರು. ಇವರೆಲ್ಲರ ತಿರಸ್ಕಾರವನ್ನು

ಬದಿಗೊತ್ತಿ ಕಲಿವೆನೆಂದರೆ ಕಾಸಿಗೇನು ಮಾಡಲಿ ಎಂಬುದು ಬೃಹದ್ ಪ್ರಶ್ನೆ. ಒಬ್ಬಳೇ ಇರುವಾಗ ಕಣ್ಣುಗಳಲ್ಲಿ ಗಂಗೆ-ಯಮುನೆಯರ ಪ್ರವಾಹ ಉಕ್ಕಿ ಹರಿಯುತ್ತಿತ್ತು. ನನ್ನ ಮ್ಲಾನ ವದನವನ್ನು ನೋಡಿದರೆ ಎಂತಹ ಮೂರ್ಖನೂ ನನ್ನ ಮನಃಸ್ಥಿತಿಯನ್ನು ಅರ್ಥಮಾಡಿಕೊಳ್ಳಬಲ್ಲ. ಆದರೆ, ನಮ್ಮವರು ಕಣ್ಣಿದ್ದೂ ಕುರುಡು, ಮನಸ್ಸಿದ್ದೂ ಮೃಗಗಳು.

ಅಣ್ಣ ಕಾಲೇಜಿನ ಎರಡನೇ ವರ್ಷದಲ್ಲಿ ಎರಡು ಬಾರಿ ಫೇಲ್ ಆದ ನಂತರ ಅಂಗಡಿಯೊಂದರಲ್ಲಿ ಕೆಲಸಕ್ಕೆ ಸೇರಿದ್ದ. ಉಮೇಶ ಮೊದಲನೇ ಪಿ.ಯು.ಸಿಯಲ್ಲಿ ಓದುತಿದ್ದಾನೆ. ಹರೀಶ ಆರನೇ ಕ್ಲಾಸು. ಅವರಾರಿಗೂ ನನಗಿದ್ದಂತಹ ಸಂಕಷ್ಟವಿಲ್ಲ. ಬೇಕುಬೇಕಾದ ಪುಸ್ತಕ ಪೆನ್ಸಿಲ್‌ಗಳು ಬೇಕೆಂದಾಗ ದೊರೆಯುತ್ತವೆ. ಅಪ್ಪ ಕೂಗಾಡಿದರೂ ಅವರ ಬಗ್ಗೆ ಅಷ್ಟೊಂದು ನಿಷ್ಕರುಣಿಯಾಗುವುದಿಲ್ಲ; ಅಥವಾ ಆಗುವಂತಿಲ್ಲ. ನನ್ನ ಬಗ್ಗೆ ಮರುಗುವವರೂ ಇಲ್ಲ. ಕೊಡುಗೈಯೂ ಇಲ್ಲ. ಹದಿಮೂರು ವರ್ಷಗಳಿಗೆ ಈ ಕಟು ಜೀವನದ ಅನುಭವ ಆಗಿದೆ. ಇನ್ನು ಬದುಕನ್ನು ನಿರ್ಣಯಿಸುವವಳು ನಾನೇ! ಯಾವುದೇ ಮಾನದಂಡದಿಂದ ಅಳೆದರೂ ಇದರಲ್ಲಿ ಸತ್ವವಿದೆ ನಾನು ಬಾಳಬೇಕು ಎನಿಸುವುದೇ ಇಲ್ಲ. ಆದರೆ, ಕಾದುನೋಡು, ಕಲೆಗಾಗಿ ಬದುಕು ಎಂಬುದು ಮಾನಸಿಕ ನಿರ್ಣಯ. ಆತ್ಮ ಹಿಂಸೆಯನ್ನೂ ಮೀರಿ ನಿಲ್ಲುತ್ತದೆ ಅದೇ ಆ ನಿರ್ಣಯ. ಚಿತ್ರಕಲೆಯ ಹವ್ಯಾಸ ಎನ್ನುವುದಕ್ಕಿಂತ ನನ್ನ ಕೈಬೆರಳುಗಳಲ್ಲಿರುವ ಕಲಾಶಕ್ತಿ ಮನವನ್ನು ಸ್ವರ್ಗಕ್ಕೆ ಹಚ್ಚುತ್ತದೆ. ಬಣ್ಣದ ಪೆನ್ಸಿಲ್ ಹಿಡಿದರೆ ಸಾಕು; ಅದರ ರೇಖೆಗಳಿಂದ ಮನವನ್ನು ಮರಳು ಮಾಡುವಷ್ಟು ಸುಸುಂದರ, ಎಂದರೆ ನನ್ನನ್ನೇ ನಾನು ಬಣ್ಣಿಸಿದಂತಾಗುತ್ತದೆ ಎಂಬ ಅಳುಕು ಹೃದಯದಲ್ಲಿ.

* * * *

"ಅಪ್ಪಾ! ನಾನು ಶಾಲೆ ಬಿಡೋಲ್ಲ. ಖಂಡಿತ ಓದಲೇ ಬೇಕು!" ಬಹುಕಷ್ಟದಿಂದ ಮನದಾಸೆಯನ್ನು ಹೊರಹಾಕಿದೆ.

"ಛಿಃ! ನಿನಗೆ ಬುದ್ಧಿ ಇದೆಯೋ ಇಲ್ಲವೋ? ನಿನ್ನಮ್ಮ ಏನೇನೂ ಆರೋಗ್ಯವಾಗಿಲ್ಲ. ಅವಳ ಸ್ಥಿತಿಗತಿ ನಿನಗೆ ಅರ್ಥವಾಗಿದೆಯೇ? ನೀನು

ಮನೆಯಲ್ಲುಳಿದರೆ ಅವಳಿಗಿಷ್ಟು ಸಹಾಯವಾಗುತ್ತದೆ.” ಉಚ್ಚ ದ
ಮೊಳಗಿತು ಘಂಟಾರವದಂತೆ.

“ಬೆಳಿಗ್ಗೆ ಸಾಯಂಕಾಲ ಎಷ್ಟಾದರೂ ಕೆಲಸ ಮಾಡುವೆ. ನನ್ನನ್ನು
ಶಾಲೆ ಬಿಡಿಸಬೇಡಿ ಅಪ್ಪಾ !”

“ಅದೆಲ್ಲಾ ಆಗೋಲ್ಲ. ಹಣಕ್ಕೆ ಎಲ್ಲಿಗೆ ಹೋಗಲಿ ?”

“ಪುಸ್ತಕಕ್ಕಾಗಿ ನೀವು ಖರ್ಚು ಮಾಡಬೇಡಿ. ನನ್ನ ಗೆಳತಿಯರಿಂದ
ತೆಗೆದುಕೊಳ್ಳುವೆ. ಸರಕಾರಿ ಶಾಲೆ ಅಂದಮೇಲೆ ಖರ್ಚು ಕಡಿಮೆ.”

“ಆಗೊಲ್ಲ, ಹೋಗು. ಒಳಗೇನು ಕೆಲಸವಿದೆ ನೋಡಿಕೋ.....?”
ದನಿ ಮಾಡು ಮುಟ್ಟುವಂತೆ ಮೊಳಗಿತು. ನಾನು ನಡುಗಿಹೋದೆ.
ಹಿತ್ತಿಲಿನ ಬಾಗಿಲ ಮೆಟ್ಟಿಲು ಕೈ ಬೀಸಿ ಕರೆಯಿತು. ಹೋಗಿ ಕುಳಿತು
ಕೊಂಡೆ. ಎರಡೂ ಮಂಡಿಗಳು ತಲೆಗೆ ಆಶ್ರಯ ನೀಡಿದುವು. ಜೊತೆಗೆ
ಕಂಬನಿಯ ಕೋಡಿಯೂ ಹರಿಯಿತು. ಅಳುವಷ್ಟು ಹೊತ್ತು ಅತ್ತು
ಗೆಳತಿಯರ ಶಾಲಾ ಜೀವನವನ್ನು ಕುರಿತು ಯೋಚಿಸಿದೆ. ಹೆಣ್ಣಾಗಿ ಹುಟ್ಟ
ಬಾರದು ಎಂದು ಹೆಣ್ಣು ಜನ್ಮವನ್ನು ಹಳಿಯುವುದೇಕೆ ? ಎಷ್ಟೋ ಮಂದಿ
ಪುಣ್ಯವಂತರಿರುತ್ತಾರೆ. ದೇವರು ಆ ಪುಣ್ಯದಲ್ಲಿ ನನಗೆ ಕಿಂಚಿತ್ತೂ ನೀಡ
ಲಿಲ್ಲ. ನಾನು ಖಂಡಿತ ನತದೃಷ್ಟೆ.....ಇಂತಹ ಬದುಕಿಗಿಂತ ಸಾವು ಲೇಸು.
ಆದರೆ, ಕಲಾಶಕ್ತಿ ನಿಜವಾಗಿಯೂ ಬದುಕಿಗೆ ಆಸರೆ.

ಅಣ್ಣ ರಾತ್ರಿ ಮನೆಗೆ ಬಂದ. ಅವನಿಗೆ ಊಟವಿಡುತ್ತ ಕೇಳಿದೆ
“ಅಣ್ಣಾ ! ನಾನು ಶಾಲೆಯ ಓದು ಮುಂದುವರಿಸಬೇಕು. ನನ್ನ ಓದಿಗೆ
ಅಂತಹ ಖರ್ಚೇನೂ ಬರುವುದಿಲ್ಲ. ಪುಸ್ತಕಗಳನ್ನು ಗೆಳತಿಯರಿಂದ ಪಡೆದು
ಕೊಳ್ಳುವೆ....” ಎಂದೆ. ಮಾತು ಮುಗಿಯುವುದರೊಳಗಾಗಿ ದನಿಗದ್ಗ
ದವಾಯಿತು.

ಅವನು ಸಹನೆಯನ್ನು ಬದಿಗೊತ್ತಿ ನಿಷ್ಠೂರದಿಂದಲೇ ನುಡಿದ
“ಹೋಗೇ.....! ಹೆಣ್ಣು ಓದಿ ಕಡಿಯುವುದು ಅಷ್ಟರಲ್ಲೇ ಇದೆ. ನಿನ್ನ
ಓದಿಸುವಷ್ಟು ಧನಿಕನೇ ನಾನು ? ನನಗೆ ಬರುವ ಕಾಸು ನನಗೇ ಸಾಲುವು
ದಿಲ್ಲ !”

ನಾನು ನಿರುತ್ತರಳಾದೆ. ಕಾಲುಗಳಿಗೆ ಆದೇಶವೀಯದಿದ್ದರೂ ಕೊಠಡಿಯ ಕಡೆಗೆ ಓಡಿದುವು. ಚಾಪೆಯ ಮೇಲೆ ಮೈಮುದುಡಿ ಕುಳಿತುಕೊಂಡೆ. ದುಃಖ–ಸಂಕಟಗಳ ವಶವಾಯಿತು ಮನಸ್ಸು. ಭಗವಂತನಿಗೆ ಆತ್ಮನಿವೇದನೆ ಮಾಡಿಕೊಂಡೆ. ಅವನು ಇರುವುದು ಹೌದಾದರೆ ಕೇಳಿಸಿಕೊಂಡಾನೇನೋ ಎಂಬ ಆಸೆಯಿಂದ.

* * * *

ಈ ಜಗತ್ತು ಇಷ್ಟೆ.....ಎಲ್ಲರ ಸೇವೆಗೂ ನಾ....ನು ! ನನಗಾಗಿ ಯಾರೂ ಇ.....ಲ್ಲ.

ಈದಿನ ನೀಲಾ ಬಂದಳು. ಅವಳು ಈ ಸಲಿ ಒಂಭತ್ತನೆಯ ತರಗತಿಗೆ ಹೋಗುತ್ತಾಳೆ. ಅವಳು ಅಂತಹ ಜಾಣೆಯೂ ಅಲ್ಲ. ಮಾರ್ಕ್ಸ್ ನನಗಿಂತ ಕಡಿಮೆ ಆದರೇನು ? ಅವರು ಹಣವಂತರು. ಅವಳಿಗೆ ವಿದ್ಯೆ ದಕ್ಕಿತು.....

ಅವಳನ್ನು ನೋಡುತ್ತಲೂ ನನ್ನ ಹೃದ್ಗಡಲು ಕರಗಿ ಹರಿಯಿತು. ಅವಳು ನನ್ನ ಮೈದಡವಿ ಪ್ರೇಮಾತಿಶಯದಿಂದ ನುಡಿದಳು,

"ನೀನು ಒಂದು ಕೆಲಸ ಮಾಡಬಹುದು."

"ಏನು ಹೇಳು ?" ಆಸ್ಥೆಯಿಂದ ಕೇಳಿದೆ.

"ನಿನಗೆ ಒಂಭತ್ತನೇ ತರಗತಿಯ ಪುಸ್ತಕ ಮತ್ತು ಸಿಲಬಸ್ ಎಲ್ಲಾ ನಾನು ಸಂಗ್ರಹಿಸಿ ಕೊಡುವೆ. ಮನೆಯಲ್ಲೇ ಓದಿ ಪರೀಕ್ಷೆಗೆ ಕುಳಿತುಕೊ."

"ಪರೀಕ್ಷೆಗೆ ಕೂರಿಸುತ್ತಾರೆಯೋ ?"

"ಗೊತ್ತಿಲ್ಲ ....ಹೋಗಿ ಮೇಡಂ-ನನ್ನು ಕೇಳಿ ನೋಡಬೇಕು."

"ಹಾಗಾದರೆ ನಾಳೆ ಬರಲೇ ನೀಲಾ ?"

ಅವಳ ಮೃದುಹಸ್ತವನ್ನು ಅದುಮಿ ಹಿಡಿದು ಕೇಳಿಕೊಂಡೆ ; ಎದೆಯ ಸಂಕಟವನ್ನೆಲ್ಲಾ ಹೊರಹಾಕಿ.

"ಒಟ್ಟಾಗಿಯೇ ಹೋಗೋಣ ಬಾ. ನೀನು ಬುದ್ಧಿವಂತೆ! ಮೇಡಂ ಖಂಡಿತ ಒಪ್ಪಬಹುದು."

ಅನಂತರ ಎಷ್ಟೋ ವಿಷಯಗಳು ಕರಗಿದುವು ನಮ್ಮ ಆತ್ಮೀಯತೆಯ ಮಧ್ಯೆ. ಮನಸ್ಸು ದುಃಖಭರಿತವಾಗಿದ್ದರೂ ಹೊತ್ತು ಸಾನಂದದಿಂದ

ಉರುಳಿತು. ನೀಲಾ ಬಹಳ ಹೊತ್ತಿದ್ದು ನನ್ನ ನೊಂದ ಮನಕ್ಕೆ ಧೈರ್ಯ
ಹೊನಲನ್ನು ಹರಿಸಿ ಹೊರಟಳು. ಅವಳನ್ನು ಸಾನಂದದಿಂದ ಬೀಳ್ಕೊಟ್ಟಾ
ಎದೆಯ ನೆಲೆಯಲ್ಲಿ ಎಷ್ಟೋ ಸಮಾಧಾನವಿತ್ತು.

* * * *

"ನೋಡು ಮಗಳೇ ! ನೀನು ಚಿತ್ರ ಕಲೆಯ ಗೀಳು ಹಿಡಿಸಿಕೊಂಡಿ
ಹೆಣ್ಣು ಮಕ್ಕಳಿಗೆ ಅದರಿಂದೇನು ಪ್ರಯೋಜನ ? ಗಂಡು ಹುಡುಗರಿಗ
ಚಿತ್ರಕಲೆಯನ್ನು ಊರ್ಜಿತಗೊಳಿಸುವುದು ಕಷ್ಟವೇ. ಎಷ್ಟೇ ಚೆನ್ನಾಗಿದ್ದರ
ಚಿತ್ರಗಳು ಕೊಳ್ಳುವವರಿಲ್ಲದೆ ಮೂಲೆ ಸೇರುತ್ತವೆ. ಅಂದಮೇಲೆ ಬೇ
ಯಾವುದಾದರೊಂದು ಜೀವನಾಗತ್ಯ ವಿದ್ಯೆ ಕಲಿತರೆ ಕಾಸುಗಳಿಸಿಕೊಳ್ಳ
ಬಹುದು. ಯೋಚನೆ ಮಾಡು."

ತಾಯಿಯ ಸಮಯೋಚಿತವಾದ ಸಲಹೆ ಅಂತರಂಗವನ್ನು ಮುಟ್ಟು
ತ್ತದೆ. ಆದರೆ, ನಾನು ಬಿಟ್ಟರೂ ಚಿತ್ರಕಲೆ ನನ್ನನ್ನು ಬಿಡಲಾರದು.
ಅಂತಹ ಅನುಪಮ ಬಾಂಧವ್ಯ ಚಿತ್ರಕಲೆಯಲ್ಲಿ. ನಾನು ನನ್ನಲ್ಲೇ ಯೋಚಿ
ಸಿದೆ, ಅಮ್ಮ ಹೇಳಿದ್ದರಲ್ಲಿ ಹುರುಳಿಲ್ಲ ಎನ್ನಲಾರೆ. ನನ್ನ ಚಿತ್ರಗಳನ್ನು
ಕೊಳ್ಳುವರಿಲ್ಲ ನಿಜ. ಎಲ್ಲಾ ಒಟ್ಟುಗೂಡಿಸಿ ಪ್ರದರ್ಶಿಸುವ ಯೋಗ್ಯತೆಯೂ
ನನಗಿಲ್ಲ. ಇದನ್ನೆಲ್ಲ ಯೋಚಿಸಿದರೆ ಏನು ಮಾಡಲಿ ? ಎಂಬ ಪ್ರಶ್ನೆ
ಎದ್ದು ತನುಮನಗಳು ಸಂಕಟದ ಗೂಡಾಗುತ್ತವೆ.

ನೀಲಾ ಕೊಡುವ ನೋಟ್ಸ್‌ಗಳಿಂದ ಒಂಭತ್ತನೆ ತರಗತಿಯ
ಅಧ್ಯಯನ ನಡೆಸುತ್ತಿದ್ದ ನಾನು ಆಗಾಗ ಶಾಲೆಗೆ ಹೋಗಿ ಬರುವ ವಾಡಿಕೆ
ಇಟ್ಟುಕೊಂಡೆ. ಅದರಿಂದ ನನಗೊಂದು ಪ್ರಯೋಜನವಾಯಿತು ಕೂಡ.
ನನ್ನ ಚಿತ್ರಗಳನ್ನು ಮೇಡಂ-ಗೆ ಕೊಟ್ಟೆ. ಅವರು ಮೆಚ್ಚಿ ತೆಗೆದುಕೊಂಡು
ನುಡಿದರು "ಇವು ಮಾದರಿಗಾಗಿ ನಮ್ಮಲ್ಲಿ ಇರಲಿ, ಮಕ್ಕಳು ನೋಡಿದರೆ
ಕಲಿಕೆಯಲ್ಲಿ ಆಸಕ್ತಿ ಹುಟ್ಟಬಹುದು. ಅಲ್ಲದೆ, ನಾವು ನಿನಗೆ ಬೇಕು
ಬೇಕಾದ ಬಣ್ಣ, ಕುಂಚ, ಕಾರ್ಡುಗಳನ್ನು ಕೊಟ್ಟರೆ ಗ್ರೀಟಿಂಗ್ ಕಾರ್ಡ್ಸ್
ಮಾಡಿಕೊಡಬಹುದಲ್ಲವೇ ? ಅದರಿಂದ ನಿನ್ನ ಖರ್ಚಿಗೆ ಸ್ವಲ್ಪ ಹಣಗಳಿಸಿ
ಕೊಳ್ಳಬಹುದು.

ಆ ದನಿಯಲ್ಲಿ ನಿಜವಾಗಿಯೂ ಒತ್ತಾಸೆ-ಪ್ರೀತಿಗಳು ತುಂಬಿದ್ದುವು.
ಅತ್ಯಂತ ಅನಿರೀಕ್ಷಿತವಾದ ಅವರ ಸಲಹೆಯಿಂದ ಮನಸ್ಸು ಹೂವಿನಂತೆ

ರಳಿತು. ಕತ್ತಲೆಯಲ್ಲಿ ತೊಳಲುವವರಿಗೆ ದಾರಿ ತೋರಿದಂತಾಯಿತು. ನೇಕ ಚಿತ್ರಗಳನ್ನು ಬರೆದು ಶಾಲೆಯ ಎಲ್ಲ ಕೊಠಡಿಗಳಿಗೂ ಒಂದೊಂದು ಟ್ಟೆ. ಇದಕ್ಕೆಲ್ಲಾ ಗೆಳತಿಯರಿಂದ ಎರವಲಾಗಿ ಪಡೆದ ಬಣ್ಣಗಳನ್ನು ಳಸಿದ್ದೆ. ಒಂದೊಂದು ಚಿತ್ರ ತಯಾರಾಗಿ ಜೀವಕಳೆ ತುಂಬಿ ಬರುವಾಗ ಪ್ನಗಳ ಆವೇಗ ಮೇರೆ ಮೀರುತಿತ್ತು. ದುಃಖದ ಕಡಲಲ್ಲಿ ಸಂತಸದ ಳ್ಳಿ ತೇಲಿ ಬಂದಂತೆ ನಿಗಿನಿಗಿ ನಲಿವ ಮನಸ್ಸನ್ನು ಹತೋಟಿಯಲ್ಲಿಟ್ಟು ಂಡು ಕೆಲಸ ಮುಂದುವರಿಸಿದೆ.

ಅಮ್ಮನ ನರಳಾಟ ಇದ್ದದ್ದೇ. ಹಾಗೆಂದು ಅವರಿಗೆ ಅಂದಿಂದಿಗೂ ತ್ವಪೂರ್ಣ ಚಿಕಿತ್ಸೆಯ ಸಹಾಯ ಯಾರೂ ಮಾಡಲಿಲ್ಲ; ಯಾರಿಗೂ ಆ ಗ್ಗೆ ಕಾಳಜಿ ಇಲ್ಲ. ಹೇಗೂ ಅಮ್ಮ ಸುಧಾರಿಸಿಕೊಂಡು ದುಡಿಯುತ್ತಾ ಷ್ಟೆ ? ಆದ್ದರಿಂದ ಉದಾಸೀನವೇ ಮದ್ದು. ನೋವು ಅಥವಾ ರೋಗ ಸರುಕಳಿಸಿದಾಗ ಪಕ್ಕದ ಕ್ಲಿನಿಕ್‌ನಿಂದ ಮದ್ದು ತಂದು ನುಂಗಿದರೆ ಮುಗಿಯಿತು.

ನನ್ನ ಚಿತ್ರಕಲೆಯಿಂದ ಪ್ರಯೋಜನವಾದೀತು ಎಂದು ಕನಸಿನಲ್ಲೂ ಾವಿಸಿರದ ನನಗೆ ಅಲ್ಪಸ್ವಲ್ಪ ಗಳಿಕೆ ನನ್ನ ಪುಸ್ತಕ ಶಾಲೆಯ ಶುಲ್ಕ ಮತ್ತು ಣ್ಣಗಳನ್ನು ಪೂರೈಸಿತು. ಅದೃಷ್ಟವಶಾತ್ ಒಂಭತ್ತನೆಯ ತರಗತಿ ಯನ್ನು ದಾಟಿ ಹತ್ತನೆಯ ತರಗತಿಗೆ ಪದಾರ್ಪಣ ಮಾಡಿದೆ. ಗ್ರೀಟಿಂಗ್ ಾರ್ಡ್‌ಗಳನ್ನು ಅಂಗಡಿಗಳಿಗೂ ಅಲ್ಪಸ್ವಲ್ಪ ಕೊಡುತಿದ್ದೆ. ಅಂತೂ, ಗಲಿರುಳೂ ಕೆಲಸ ಮಾಡಿ ನನ್ನ ಖರ್ಚನ್ನು ನಾನು ನಿರ್ವಹಿಸಿಕೊಳ್ಳು ಂತಾದೆ. ಹತ್ತನೆಯ ತರಗತಿಯಾದುದರಿಂದ ಓದುವುದು ಬಹಳವಿತ್ತು. ಪ್ಪ-ಅಮ್ಮನನ್ನು ಕಾಡಿ ಬೇಡಿ ತರಗತಿಗೆ ಸೇರಿಕೊಂಡೆ. ಅದರಿಂದ ನನಗೆ ಸ್ವರ್ಗವೇ ಕೈಗೆಟುಕಿದಷ್ಟು ಸಂತಸವಾಯಿತೆಂಬುದನ್ನು ಹೇಳಿಕೊಳ್ಳದಿರ ಾರೆ. ಕತ್ತಲೆಯ ಗವಿಯಲ್ಲಿ ಬೆಳಕಿನ ಕಿರಣಗಳು ತೋರತೊಡಗಿದುವು. ಾನು ಆಶಾವಾದಿಯಾದೆ. ಶಾಲಾ ಉಪಾಧ್ಯಾಯಿನಿ.... ಚಿತ್ರಕಲಾ ಪಸ್ವಿ .... ಏನೇನೋ ಹಗಲುಗನಸುಗಳು ತಲೆಯಲ್ಲಿ.

* * * *

ಆದರೆ, ಅದು ಕೇವಲ ಎರಡು ತಿಂಗಳು ಮಾತ್ರ! ದುರದೃಷ್ಟ ಾಳಿಯಿಟ್ಟಿತು.

ಅನಂತರ ಯಾವುದೋ ದುರ್ದೈವ ಕಾಡತೊಡಗಿತು. ಮೊದ
ಅಪ್ಪ ಕಾಹಿಲೆ ಬಿದ್ದರು. ಆ ಕೂಡಲೇ ಅವರ ಮನಸ್ಸಿನಲ್ಲಿ ರೂಢಿ
ಪಿಶಾಚಿ ಮೈದಾಳಿತು. ಇದ್ದಕ್ಕಿದ್ದಂತೆಯೇ ನನಗೆ ಎಲ್ಲಿಲ್ಲದ ತಗಾದೆ
ಯಾರೋ ಹೆಣ್ಣು ಕೇಳಿದ್ದಾರೆ....ಬಹುಶಃ ಅಪ್ಪನೇ ಅವರನ್ನು ಹೋ
ನೋಡಿರಬಹುದು ಎನಿಸುತ್ತೆ. ಅಂತೂ, ದುರ್ವಿಧಿಯ ಕಾಟ ಆರಂಭ
ಗಂಡು ಯಾವುದೋ ಫ್ಯಾಕ್ಟರಿಯಲ್ಲಿ ಕೆಲಸಗಾರ. ಅವನಿಗೆ ಮೊದಲ ಸ
ಯಿಂದ ಎರಡು ಮಕ್ಕಳಿವೆ. ಮಕ್ಕಳು ಚಿಕ್ಕವಾದುದರಿಂದ ಎರಡನೆಯ
ಹೆಣ್ಣು ಬೇಕೇಬೇಕು. ಮೊದಲ ಪತ್ನಿ ಹೇಗೆ ಕಾಲವಾದಳು ಎಂಬುದು ತಿ
ಯದು. ಅದನ್ನು ಅಪ್ಪ ಏಕೆ ವಿಚಾರಿಸಲಿಲ್ಲವೋ....ಅಥವಾ ವಿಚಾರಿಸಿದ್ದು
ವಿಷಯವನ್ನು ಗೌಪ್ಯವಾಗಿಟ್ಟಿರಬಹುದೋ, ಅದೂ ಹೇಳಲಾರೆ. ನಾನ
ಕೈಮುಗಿದು ಕಾಲು ಹಿಡಿದು ಬೇಡಿಕೊಂಡೆ. ನನಗೆ ಈಗಲೇ ಮದುವೆ
ಬೇಡ. ಇನ್ನೆರಡು ವರ್ಷ ಓದಿದರೆ ಸಾಕು ಅನಂತರ ಟೀಚರ್ ಆಗಿ ಕೆಲಸ
ಮಾಡಿ ನಿಮ್ಮನ್ನು ಸಾಕುವೆ ಎಂದು ! ನನ್ನ ಹೇಳಿಕೆ-ಬೇಡಿಕೆ ಅರಣ್ಯ
ರೋದನವಾಯಿತು.

ಹಾ ! ನನ್ನ ಗೋಳನ್ನು ಕೇಳುವವರಾರು ?

ಆತ ವರದಕ್ಷಿಣೆಯಿಲ್ಲದೆ ಮದುವೆಯಾಗಲು ಒಪ್ಪಿದ್ದಾನೆ. ಇರುವುದು
ಇದೇ ನಗರದಲ್ಲಿ. ಮೂರು ನಾಲ್ಕು ಮೈಲಿ ಅಂತರದ ಬಡಾವಣೆ.
ವಯಸ್ಸು ಮೂವತ್ತು-ಮೂವತ್ತೆರಡು ಇರಬಹುದು. ಹೆಚ್ಚು ವಯ
ಸ್ಸಾಗಿಲ್ಲ. ಅಂದಮೇಲೆ, ಬಿಡುವುದುಂಟೇ ? ಎಂಬುದು ಎಲ್ಲರ ಒತ್ತಾ
ಯದ ಪ್ರಶ್ನೆ.

ದಿನನಿತ್ಯ ಹಗರಣ. ಎತ್ತು ಏರಿಗೆಳೆದರೆ ಕೋಣ ನೀರಿಗೆಳೆಯಿತು
ಎಂಬ ಗಾದೆಯ ಅವತರಣ. ಅಮ್ಮ ನನಗೆ ಬೆನ್ನು ತಟ್ಟಲಿಲ್ಲ "ನನಗೆ
ಆರೋಗ್ಯವಿಲ್ಲ ಮಗಳೇ ! ನಾನು ಕಣ್ಣು ಮುಚ್ಚುವ ಮುನ್ನ ನೀನು
ಗೃಹಿಣಿಯಾಗುವುದು ಲೇಸು. ಯೋಚನೆ ಮಾಡು. ಹಠ ಮಾಡಬೇಡ.
ಮುಂದೆ ನಿನ್ನ ಗಂಡ ಒಪ್ಪಿದರೆ ಎರಡು ವರ್ಷ ಓದುವುದೇನು ಕಷ್ಟವಲ್ಲ.....
ಎಂದು ಮುಂತಾಗಿ ಹೇಳತೊಡಗಿದರು. ಅಣ್ಣ-ಅಪ್ಪ ಕಿಡಿಕಾರುವಂತೆ
ಗದರಿಕೊಂಡರು. ನನಗೆ ಎಲ್ಲಾದರೂ ನೆಲೆಸಿಕ್ಕುವಂತಿದ್ದರೆ ಓಡಿಹೋಗ

ಬಹುದಾಗಿತ್ತು. ನನ್ನ ಸ್ಥಿತಿಯಲ್ಲಿ ಕೆರೆ ಭಾವಿ ಮಾತ್ರ ಸರಿಯಾದ ನೆಲೆ. ನಾನು ಏನೇನು ಕನಸು ಕಟ್ಟಿದ್ದೆನೋ ಅದೆಲ್ಲಾ ಒಡೆದ ಕನ್ನಡಿಯಾಯಿತು. ಹೆಣ್ಣಿಗೆ ಮದುವೆಯಿಲ್ಲದೆ ಬದುಕೇ ಇಲ್ಲವೇ ? ಈ ಜನ ಏಕೆ ಮದುವೆಗಾಗಿ ಗೀಳಿಡುತ್ತಾರೋ ಅರ್ಥವಾಗುವುದಿಲ್ಲ. ಅದಕ್ಕಿಂತ ನನ್ನನ್ನು ಎರಡು ವರ್ಷ ಓದಿಸಿದ್ದರೆ.... ನೆಮ್ಮದಿಯ ಜೀವನ ನಡೆಸುತಿದ್ದೆ. ಖಂಡಿತ ನನಗೆ ಈ ಮದುವೆ ಬೇಕಿಲ್ಲ. ಆತನಿಗೆ ಎರಡು ಮಕ್ಕಳು ಬೇರೆ ಇವೆ. ಈ ಜವಾಬ್ದಾರಿ ಸಾಮಾನ್ಯವೇ ....? ಯೋಚಿಸುತಿದ್ದಂತೆ ಎರಡು ಕಣ್ಣುಗಳಲ್ಲಿ ಕಂಬನಿಯ ಕೋಡಿ ಹರಿಯಿತು. ನನ್ನ ನಿತ್ಯ ರೋದನವನ್ನು ಕೇಳುವವರಾರು ? ವಿಧಿಯೂ ಕುರುಡು, ಮನುಷ್ಯರೂ ಕುರುಡು.

*   *   *   *

ನನ್ನ ಭವಿಷ್ಯಕ್ಕೆ ನನ್ನವರು ಕಲ್ಲು ಹಾಕಿದರು.

ಒಲ್ಲದ ಮದುವೆಗೆ ಕಟ್ಟು ಬಿದ್ದು ರಾಮಕೃಷ್ಣನ ಹಸೆಮಣೆ ಹೆಣ್ಣಾದೆ. ಮೊದಲಿನ ಮಕ್ಕಳೆರಡೂ ನನ್ನ ತೊಡೆಯ ಮೇಲೆ ಕುಳಿತುಕೊಳ್ಳುತಿದ್ದುವು. ಮದುವೆಯ ಗದ್ದಲ ಕಳೆದ ನಂತರ ನಾನು ಅವನ ಮನೆಗೆ ಸ್ಥಳಾಂತರ ಹೊಂದಿದೆ. ಆಗ ನನಗಾದ ದುಃಖ ಅಷ್ಟಿಷ್ಟಲ್ಲ. ಆ ರಾತ್ರಿಯಿಂದಲೇ ನರಕವಾಸ ಆರಂಭ. ಅವನೊಬ್ಬ ಧೂರ್ತ. ಅವನ ಕಪಟದೊಳಗೆ ಹೃದಯವೇ ಇಲ್ಲ. ನನ್ನ ಹಣ್ಣುಗಾಯಿ ನೀರುಗಾಯಿ ಮಾಡಿದ. ಪ್ರತಿ ನಿಮಿಷವೂ ಅಲ್ಲಿಂದ ಓಡಿಹೋಗುವ ಮನಸ್ಸು. ಈ ಜೀವನ ಬೇಡವೇ ಬೇಡ ಒಂದು ಘೂತ್ಕರಿಸುತಿತ್ತು ಮನಸ್ಸು. ಮನೆಯಲ್ಲಿ ದವಸ ಧಾನ್ಯಕ್ಕೂ ಕೊರತೆ. ಹಣದ ಮುಖ ನೋಡಲೇ ಇಲ್ಲ. ಅವನಿಗೂ ಮಕ್ಕಳಿಗೂ ಹೊಟ್ಟೆ ತುಂಬ ಊಟ ಇಡುವುದು ಅನಿವಾರ್ಯ. ಕೊರತೆ ಬೀಳುತಿದ್ದುದು ನನಗೆ ಎಂದರೆ ತಪ್ಪಲ್ಲ. ದವಸ ಬೇಕೆನ್ನುವಂತಿಲ್ಲ. ಸಾಮಗ್ರಿ ಇಲ್ಲವೆನ್ನುವಂತಿಲ್ಲ. ನನ್ನ ಕಷ್ಟವೇನನ್ನೂ ಮುಂದಿಡುವಂತಿಲ್ಲ. ಇಟ್ಟರೆ ಹೆಬ್ಬುಲಿಯ ಅವತಾರ ! ವಿಷಯ ಮುಂದಿಟ್ಟಾಗಲೆಲ್ಲಾ ಹೊಡೆತ ಬಡಿತಗಳು, ಅವಾಚ್ಯ ಶಬ್ದಗಳು ಪ್ರೈಮನಸಗಳನ್ನು ಅಪ್ಪಳಿಸುತಿದ್ದುವು. ಅಲ್ಲದೆ ಸಂಶಯ ಪಿಶಾಚಿ ! ಎಲ್ಲಿ ಹೊರಹೋಗುವಳೋ, ಯಾವನೊಬ್ಬ

ಬರುವನೋ ಎಂಬ ದುಷ್ಟ ಚಿಂತನೆಗಂತೂ ಕೊನೆಯೇ ಇಲ್ಲ. ಮಾನಸಿಕ ಹಿಂಸೆ, ದೈಹಿಕ ಹಿಂಸೆಗಳೇ ನನ್ನ ಒಡಲಿಗೆ ಕೂಳು! ಮಕ್ಕಳನ್ನಿಟ್ಟುಕೊಂಡು ಚಿತ್ರಕಲೆಗೆ ಗಮನಕೊಡುವಂತಿಲ್ಲ. ಮೇಲಾಗಿ, ಹೊರಹೋಗಲು ನನಗೆ ಅನುಮತಿ ಇಲ್ಲವಾದ್ದರಿಂದ ಚಿತ್ರಗಳನ್ನು ಚಿತ್ರಿಸಿ ಮಾಡುವುದೇನು ? ಮುಖಾಮುಖಿಯಾಗಿ ಯಾರೊಡನೆಯೂ ಮಾತಾಡಲು ಸ್ವಾತಂತ್ರ್ಯವಿಲ್ಲ. ನೆರೆಮನೆಯವರೊಂದಿಗೂ ಬೆರೆಯುವಂತಿಲ್ಲ. ಹಗಲೆಲ್ಲ ಕದ ಮುಚ್ಚಿ ಕುಳಿತಿರುವ ಭಾಗ್ಯ ನನ್ನ ಪಾಲಿಗೆ. ಎಲ್ಲಾದರೂ ಕೆರೆ ಬಾವಿ ಬೀಳುವ ನೆನಪು ಪದೇಪದೇ ಬರುತ್ತಿದ್ದರೆ ಚಿತ್ರಕಲೆಯ ಭವಿಷ್ಯ ಮನವನ್ನು ಹೆಡೆಮುರಿಗಟ್ಟುತಿತ್ತು. ನಾನು ದೂರ ಭವಿಷ್ಯವನ್ನು ಕುರಿತು ನೆನೆದು ಎಂದಾದರೂ ಒಳ್ಳೆಯ ದಿನಗಳು ಬಂದಾವು ಎಂಬ ಸಣ್ಣ ಆಸೆಯಿಂದ ಸುಮ್ಮನಾಗುತ್ತಿದ್ದೆ. ರಾಮಕೃಷ್ಣ ಎಂದು ಮಹಿಮಾಮಯರ ಹೆಸರನ್ನು ಹೊತ್ತ ಧೂರ್ತ ಗಂಡನಿಂದ ಬಿಡುಗಡೆಯನ್ನು ಬಯಸಿ ಸಂಕಟದಿಂದ ಚೀರಿಡುತ್ತಿತ್ತು ಆತ್ಮಪಕ್ಷಿ. ಗಂಗೆ ಯಮುನೆಯರ ನಿತ್ಯ ಪ್ರವಾಹ ಕಣ್ಣುಗಳಲ್ಲಿ. ಮೈ ಎಲುಬಿನ ಹಂದರವಾದರೂ ಅವನಿಗೆ ನನ್ನ ಮೇಲೆ ಕರುಣೆ ಇಲ್ಲವೇ ಇಲ್ಲ. ಪ್ರೀತಿ-ವಿಶ್ವಾಸವೂ ಇಲ್ಲ. ಒಡಲ ಹಸಿವೆಯೇ ಪ್ರಧಾನ.

* * * *

ಈ ಸಂಸಾರದಲ್ಲಿ ಒಂದು ದಿನ ಅಲ್ಲ-ಅಲ್ಲವೇ ಅಲ್ಲ ; ಒಂದು ಗಳಿಗೆಯೂ ಸುಖ ಕಾಣಲಿಲ್ಲ. ಆತ ಅಲ್ಲಿ ಬಂದರೆ ಇಲ್ಲಿ ನಡುಕ. ಸೀರೆ ಬಟ್ಟೆಗಳೆಲ್ಲ ಹರಿದು ಚಿಂದಿ. ಅವನ್ನೇ ಹೊಲಿದು ಹೊಲಿದು ಮಾನ ಮುಚ್ಚುವುದೇ ಆಗಿದೆ. ಆತನ ದುಡಿಮೆಯಲ್ಲಿ ನಿಜವಾಗಿಯೂ ನ್ಯಾಯ ವಿತರಣೆಯಾದರೆ ಅಲ್ಪಸ್ವಲ್ಪ ಉಳಿತಾಯ ಮಾಡಿಕೊಂಡು ಸುಖಸಂಸಾರ ನಡೆಸಬಹುದು. ಸ್ವಾರ್ಥ-ಅವ್ಯವಹಾರಗಳ ರೋಗದಿಂದ ಜೀವನ ನರಕ. ನಾಲ್ಕು ವರ್ಷಗಳ ನರಕ ಜೀವನದಲ್ಲಿ ಎರಡು ಹೆಣ್ಣು ಮಕ್ಕಳ ತಾಯಿಯಾದೆ. ಮೊದಲಿನವರಿಬ್ಬರೂ ಹುಡುಗರು. ಬುದ್ಧಿವಂತ ಮಕ್ಕಳಾದರೂ ಆಟಂಗುಳಿಗಳು. ಬಲಾತ್ಕಾರದಿಂದ ಓದಿಸಬೇಕು. ಆ ಮನೆಗೊಂದು ರೂಪುರೇಷೆಯೂ ಇಲ್ಲ. ಗೋಡೆಯ ಗಾರೆ ಅಲ್ಲಲ್ಲಿ ಕಳಚಿ ಹಲ್ಲು ಚಿಲಿ

ದಂತಿದೆ. ನೆಲಕ್ಕೂ ಅದೇ ಗತಿ. ಬಚ್ಚಲು ಕಿತ್ತು ಹೋಗಿ ನೀರು ಹೊರ ಹೋಗುವ ಬದಲು ಅಲ್ಲೇ ತಂಗುತ್ತದೆ. ದುರ್ನಾಥ ತಪ್ಪಿಸಲು ನೀರು ಎತ್ತಿ ಆಚೆ ಚೆಲ್ಲಬೇಕು. ನನ್ನ ಚಿತ್ರಕಲೆ ಮೂಲೆಗೆ ಬಿತ್ತು. ಗಳಿಸಿಕೊಳ್ಳು ತಿದ್ದ ಪುಡಿಕಾಸು ಬಾಗಿಲಾಚೆಗೆ ಉಳಿಯಿತು. ಸ್ಕೂಲಿಗೆ ಹೋಗಿ ಬರುವೆ, ಎಂದು ಬೇಡಿಕೊಂಡರೂ ನಂಬಿಕೆಯಿಲ್ಲ. ಸಂಶಯ ಪಿಶಾಚಿಗೆ ಮೈಯೆಲ್ಲಾ ಕಣ್ಣು-ಮನಸ್ಸು. ಅದರಿಂದ ನನ್ನ ಕೈಕಾಲಿಗೆ ಬೀಗ. ಎಷ್ಟೋ ಸಲಿ ಆತ್ಮಹತ್ಯೆಗೆ ಹವಣಿಸಿ ಹಿಂಜರಿದಿರುವೆ. ನಾಲ್ಕು ಮಕ್ಕಳನ್ನು ನೆನೆಸಿ ಕೊಂಡರೆ ಸಾಯಲು ಮನಸ್ಸು ಬರುವುದಿಲ್ಲ. ಜೀವನ ಇಷ್ಟೊಂದು ನರಕ ವಾದರೆ ಬದುಕು ಏಕಾದರೂ ಬೇಕು? ಸಂಕಟ-ಸಂಕಷ್ಟಗಳ ಕೂರ್ಮುಳ್ಳು ತನುಮನಗಳನ್ನು ಚುಚ್ಚುತ್ತಲೇ ಇರುತ್ತದೆ, ದಯೆ ದಾಕ್ಷಿಣ್ಯಗಳಿಲ್ಲವೇ ಇಲ್ಲ. ಹಿಂದೂಸ್ಥಾನದಲ್ಲಿ ಹೆಣ್ಣಿನ ಬಾಳು ಇಷ್ಟೆ. ಮೇಲೆ ತಳುಕು ಒಳಗೆ ಹುಳುಕು. ಸಂಸ್ಕೃತಿಯ ನೇಮದಲ್ಲಿ ಜೀವನ ನರಕದ ಕುಂಡ. ಸ್ತ್ರೀ ಸ್ವಾತಂತ್ರ್ಯ ಈ ಜನ್ಮದಲ್ಲಿ ಬಧುವುದಿಲ್ಲ. ಹೆಣ್ಣು ಕಲಿತರೂ ಕಲಿಯ ದಿದ್ದರೂ ಒಂದೇ.

ಹೃದಯದಾಳದಲ್ಲಿ ಹುದುಗಿದ ಕಲೆ ಹೊರ ಹೊಮ್ಮಲು ಹವಣಿ ಸುವುದು ಸಹಜ. ಎಷ್ಟೇ ಪ್ರಯತ್ನಿಸಿದರೂ ನಾನು ಕಲೆಯನ್ನು ದೂರೀ ಕರಿಸಲಾರೆ. ನಿಂತಲ್ಲಿ ಕುಳಿತಲ್ಲಿ ಕೆಲಸಮಾಡುವಲ್ಲಿ ಅಕ್ಷಿಪಟಲದ ಮೇಲೆ ರೇಖಾರೂಪದಲ್ಲಿ ನಲಿಯುತ್ತದೆ. ಒಲೆಯ ಬಳಿ ಬೂದಿಯ ಮೇಲೆ, ಅಕ್ಕಿ ಹಸನುಮಾಡಿದ ಧೂಳಿನ ಮೇಲೆ ಕಡ್ಡಿಯಿಂದಲೋ, ತುದಿ ಬೆರಳಿನಲ್ಲೋ ಮೂಡಿ ಬರುತ್ತದೆ ರೇಖಾಚಿತ್ರ. ಎಷ್ಟೋ ವೇಳೆ ನನಗರಿಯದಂತೆಯೇ ನಾನೇ ಚಿತ್ರಿಸುವೆ. ಬಹುಶಃ ಇದು ದಿನನಿತ್ಯದ ಪ್ರಸಂಗ. ಮಕ್ಕಳ ಪೆನ್ಸಿಲ್ ತೆಗೆದುಕೊಂಡು ಚೂರು ಪಾರು ಕಾಗದದ ಮೇಲೆ ಗೀಚದೆ ಬಿಡ ಲಾರೆ. ಅದನ್ನು ಎಲ್ಲಿ ನೋಡಿದರೋ ನೆರೆ ಮನೆಯ ಮಕ್ಕಳು. ನನ್ನನ್ನು ಕಾಡಲಾರಂಭಿಸಿದರು. "ಅಕ್ಕಾ! ನಮಗೆ ಹೇಳಿಕೊಡಿ!"

"ಆಗಲಿ, ಬಣ್ಣ-ಕುಂಚ-ಕಾಗದ ಎಲ್ಲಾ ತೆಗೆದುಕೊಂಡು ಬನ್ನಿ." ಎಂದೆ. ಹಾಗಾದರೂ ನನ್ನ ಚಿತ್ರಕಲೆ ಊರ್ಜಿತವಾಗಲಿ ಎಂದು. ಎದೆ ಯಾಳದಲ್ಲಿ ಸಂತಸ ತುಂಬಿ ತುಯ್ಯಲಾಡಿತು.

ಇಬ್ಬರು ಹುಡುಗಿಯರು ಒಬ್ಬ ಹುಡುಗ. ಮೂವರು ಬರಲೊಪ್ಪಿದರು. ಮೂವರೂ ಹದಿ ಬರೆಯದ ಹಕ್ಕಿಗಳು. ಮುಂದಿನ ಕದ ಮುಚ್ಚಿಕೊಂಡರೆ ಒಳಗೆ ಬೆಳಕಿಲ್ಲ. ಆದ್ದರಿಂದ ಮುಂಬಾಗಿಲು ತೆರೆದಿಟ್ಟುಕೊಂಡು ಪಾಠ ಆರಂಭಿಸಿದೆ. ಆ ಹುಡುಗರ ಸಹವಾಸ ಮನಸ್ಸಿಗೆ ಖಂಡಿತವಾಗಿಯೂ ಮುದ ತಂದಿತು. ಮೂರು ದಿನ ಪಾಠ ಸರಾಗವಾಗಿ ನಡೆಯಿತು.

ದಸರಾ ರಜೆಯಾದ್ದರಿಂದ ಮಕ್ಕಳಿಗೆ ಒಂಭತ್ತು ದಿನಗಳೂ ಕಲಿತುಕೊಳ್ಳುವ ಇಚ್ಛೆ. ಉತ್ಸಾಹದಿಂದ ಬರುತಿದ್ದರು. ನಾಲ್ಕನೆಯ ದಿನ ಪಾಠ ನಡೆಯುತಿತ್ತು. ಇನ್ನೂ ಹನ್ನೊಂದು ಗಂಟೆ. ನಿನ್ನೆ ಬರೆದ ರೇಖಾಚಿತ್ರಕ್ಕೆ ಬಣ್ಣದ ಮೆರುಗು ಕೊಡುವ ಕೆಲಸ. ಮಕ್ಕಳು ಬಣ್ಣ ಹಚ್ಚಿ ಒಬ್ಬರಿಗೊಬ್ಬರಿಗೆ ತೋರಿಸಿಕೊಳ್ಳುತ್ತ ಸಂತಸ ಪಟ್ಟರು. ಅದನ್ನು ನೋಡಿ ನನಗೂ ಸಂತಸ. ಎಷ್ಟೋ ದಿನಗಳು ನಂತರ ನಗೆ ಮುಗುಳು ಅರಳಿತು. ನನ್ನ ಕಲೆ ಇನ್ನೂ ಜೀವಂತವಾಗಿರುವುದು ನಿಜಕ್ಕೂ ನನಗೇ ಆಶ್ಚರ್ಯ.

ಬಾಗಿಲ ಬಳಿ ಪಾದರಕ್ಷೆಗಳ ಲರಕ್ ಲರಕ್ ಸದ್ದು.

ಒಡನೆ ಎಲ್ಲರ ದೃಷ್ಟಿಯೂ ಬಾಗಿಲ ಕಡೆ ಸಹಜವಾಗಿ ಹರಿಯಿತು. ಒಳಬಂದವನು ಯಜಮಾನ. "ರಾಮಣ್ಣ ! ನಾವೆಲ್ಲಾ ಚಿತ್ರಕಲೆ ಕಲಿಯುತ್ತೇವೆ." ದಿನೂ ಚಿತ್ರ ಎತ್ತಿ ಹಿಡಿದು ತೋರಿದ. ಅದರಿಂದ ಸಂತಸವಾಗುವ ಬದಲು ರಾಮಕೃಷ್ಣ ಕೆರಳಿ ಕೆಂಡವಾದ.

"ಛೀ ! ಗದ್ದಲ-ಗಲಾಟೆ ! ಎಲ್ಲರೂ ತೊಲಗಿ ಇಲ್ಲಿಂದ ! ನನಗೆ ತಲೆ ನೋವು ! ಮಲಗಬೇಕು !"

ಮುಖ್ಯವಾಗಿ ಆ ಮಾತು ದಿನೂ-ಗೆ ಹೇಳಿ ಒದರಿದಂತಿತ್ತು. ಅವನಿಗೆ ಚಿಗುರು ಮೀಸೆ ಮೂಡುತಿದ್ದರೂ ಹದಿನಾಲ್ಕು ವಯಸ್ಸು ಮಾತ್ರ. ಪಾಪ ! ಅವನು ಪೆಚ್ಚಾಗಿ ಹೊರಹೋದ. ಎಲ್ಲರೂ ಹಿಂಬಾಲಿಸಿದರು. ಮುಂದುಗಡೆ ಬಾಗಿಲು ಮುಚ್ಚಿದ ನಂತರ ನನಗೆ ಸರಿಯಾದ ಕಪಾಳ ಮೋಕ್ಷವಾಯಿತು. ಎರಡು ಮೂರು ದಿನಗಳ ಕ್ಷಣಿಕ ಸಂತಸ ಗಾಳಿಯಲ್ಲಿ ಜೊಳ್ಳು ತೂರಿದಂತಾಯಿತು. ನಾನು ಏನೂ ಹೇಳಲಾರದಾದೆ. ಎದೆಯ ಹಕ್ಕಿ ವೀತರಾಗದಿಂದ ಹಾಡಿತು. ಅತ್ಯಂತ ಮಾನಸಿಕ ಹಿಂಸೆ. ದೈಹಿಕ ಹಿಂಸೆ. ಆತ್ಮಿಕ ಹಿಂಸೆಗಳ ಮಹಾ ಪೂರದಲ್ಲಿ ಮುಳುಗಿ ಕೊಚ್ಚಿಹೋದೆ.

ನಾನಂತೂ ಈ ಜೀವಿತದಲ್ಲಿ ದಡ ಹತ್ತಲಾರೆ. ಅದು ಖಂಡಿತ, ಬಹುಶಃ ನಾನು ಪಡೆದುಕೊಂಡು ಬಂದ ಪುಣ್ಯ ಇಷ್ಟೇ....ಅಲ್ಲ, ಅಲ್ಲವೇ ಅಲ್ಲ. ಇದು ಂದುಸ್ಥಾನದ ವೈಶಿಷ್ಟ್ಯ. ಒಬ್ಬೊಬ್ಬರದು ಒಂದೊಂದು ರೀತಿ ನೀತಿ. ಎಲ್ಲಾ ಸ್ತ್ರೀ ಮರ್ದನಕ್ಕಾಗಿ.

*    *    *    *

ಅಮ್ಮ ಕಾಹಿಲೆಯಿಂದ ನರಳಿ ಸ್ವರ್ಗದ ಬಾಗಿಲು ತಟ್ಟಿದರು.

ಅವರ ಸೇವೆ ಮಾಡುವೆನೆಂದು ಬಹಳವಾಗಿ ಕೇಳಿಕೊಂಡೆ. ಅತ್ತು ರೆದು ಗೋಳಾಡಿದೆ. ನನ್ನ ಅರಣ್ಯ ರೋದನ ಭಗವಂತನಿಗೂ ಮುಟ್ಟ ಲ್ಲ. ಅಂದಿಂದಿಗೂ ಅತ್ತೂ ಅತ್ತೂ ಕಂಬನಿಯ ಕಡಲು ಬತ್ತಿ ಹೋಗಿದೆ. ಈಗ ಅಳುತ್ತೇನೆಂದರೂ ಕಂಬನಿ ಸುರಿಯುವುದಿಲ್ಲ. ಅಪ್ಪನೂ ಅಮ್ಮನ ಂದೆಯೇ ಹೋದರು. ಇಬ್ಬರಿಗೂ ತಿಲಾಂಜಲಿ ಬಿಟ್ಟದ್ದು ಇಲ್ಲಿಂದಲೇ. ಣ್ಣ ತಮ್ಮಂದಿರು ಯಾವತ್ತೂ ಈ ಕಡೆ ಸುಳಿಯಲಿಲ್ಲ. ಬಹುಶಃ ಅವರಿಗೆ ನ್ನಿರುವು ಮರೆತು ಹೋಗಿತ್ತೋ ಏನೋ.

ಒಂದು ದಿನ.....ಬಹುಶಃ ಬೆಳಗಿನ ಹತ್ತರ ಸಮಯ.

ಯಾರೋ ಧಾವಿಸಿ ಬಂದು ಹೇಳಿದರು ರಾಮಕೃಷ್ಣ ಫ್ಯಾಕ್ಟರಿಯಲ್ಲಿ ಕಸ್ಮಿಕ ಅಪಘಾತಕ್ಕೀಡಾದ ಎಂದು! ಹತ್ತು ವರ್ಷಗಳಿಂದ ಹೊಸ್ತಿಲು ಾಟದಿದ್ದ ನನಗೆ ಆ ಫ್ಯಾಕ್ಟರಿಯೆಲ್ಲಿದೆ? ಎಲ್ಲಿಗೆ ಹೋಗಬೇಕು? ಏನು ಮಾಡಬೇಕು? ಒಂದೂ ತಿಳಿಯದು. ನೆರೆಮನೆಯವರು ಬಂದು ತುಂಬಿ ಕೊಂಡರು. ಪೋಸ್ಟ್‌ಮಾರ್ಟಂ ಆಗಬೇಕು ಎಂಬುದು ಗೊತ್ತು..... ಫ್ಯಾಕ್ಟರಿಯವರೇ ಮಾಡಿಸುತ್ತಾರೆ ಮತ್ತೇಕೆ ಹೋಗಲಿ ಎನಿಸಿತು. ಧಿಗ್ಭ್ರಮೆ ಮನವನ್ನು ಅಪ್ಪಳಿಸಿತು. ನಾನು ಮೈಮರವಟ್ಟಂತೆ ಕುಳಿತೆ. ಮಂಗಳ ತ್ರ್ಯವನ್ನು ತೆಗೆಯಬೇಕು ಎಂದು ಗುಸುಗುಸು ಮಾತು ಜನರ ಬಾಯಿ ಮಲ್ಲಿ ಹರಿಯುತಿತ್ತು. ಫ್ಯಾಕ್ಟರಿಯಲ್ಲಿ ಅಪಘಾತಕ್ಕೆ ತುಂಬಾ ದುಡ್ಡು ರುತ್ತೆ ಎಂತಲೂ ಜನರಾಡಿದರು. ಮೊದಲ ಮಡದಿಯನ್ನು ಇವನು ಂದ ಸೇಡನ್ನು ವಿಧಿ ತಿರಿಸಿಕೊಂಡಿತು, ಎಂದು ಇನ್ನಾರೋ ನುಡಿದರು.

ಹಿಂದೆಯೇ ಹೇಳಿರುವೆ ನಾನು ಕಾಸು ಕಂಡವಳೇ ಅಲ್ಲ ಎಂದು. ಮಹಸ ಕಾರ್ಯಕ್ಕೆ ಏನು ಮಾಡಲಿ ಎಂದು ನನ್ನಲ್ಲೇ ಯೋಚಿಸತೊಡ

ಗಿದೆ. ಸಂಜೆಯ ಹೊತ್ತಿಗೆ ಶವ ಅಗವಿಸಿತು. ಆ ಫ್ಯಾಕ್ಟರಿಯವರಾರೊ
ಬಂದು ನನ್ನ ಕೈಗೆ ಎರಡುಸಾವಿರ ರೂಪಾಯಿ ಕೊಟ್ಟು "ಇದು ಸಧ್ಯ
ಖರ್ಚಿಗಿರಲಿ. ಮುಂದಿನದನ್ನು ನಂತರ ಕೊಡುತ್ತೇವೆ," ಎಂದು ಎರಡ
ಸಮಾಧಾನದ ಮಾತು ಹೇಳಿ ಹೋದರು. ಶವದ ಸುತ್ತಮುತ್ತ ಮಕ್ಕಳ
ಕುಳಿತು ನೋಡುತಿದ್ದಾರೆ. ಅವರಿಗೆ ಭವಿಷ್ಯ ಅರ್ಥವೇ ಆಗಿರಲಿಲ್ಲ.

ಆ ಜನಗಳ ಮಧ್ಯೆ ಅಣ್ಣ ಅನಿರೀಕ್ಷಿತವಾಗಿ ನನ್ನ ಬಳಿಗೆ ಬ
ಪಕ್ಷಿಯಂತೆ ಬಂದೆರಗಿದ.

"ಆ ಹಣ ಕೊಡು. ದಹನ ಕಾರ್ಯಕ್ಕೆ ಬೇಕಲ್ಲ."

"ಎಷ್ಟುಬೇಕೋ ಅಷ್ಟು ಮಾತ್ರ ತೆಗೆದುಕೊ."

ಪಕ್ಕದಲ್ಲಿದ್ದವರಾರೋ ಅಂದರು "ಈವತ್ತಿಗೆ ಎಷ್ಟು ಬೇಕು ? ನೂರು
ರೂಪಾಯಿಯಿದ್ದರೆ ಸಾಕಾದೀತು."

ಅವರ ಮಾತಿನಿಂದ ನಿಜವಾಗಿಯೂ ನನಗೆ ಉಪಕಾರವಾಯಿತು.
ವಿಚಾರಶೀಲಳಾದೆ.

"ಇಲ್ಲ ಇಲ್ಲ....ಎಲ್ಲಾ ಕೊಡು ಇಲ್ಲಿ !" ಎಂದ ಅಣ್ಣ.

"ಆಗಲ್ಲಣ್ಣಾ ; ನೂರು ರೂಪಾಯಿಯಲ್ಲಿ ಮುಗಿಸುವುದಾದರೆ
ಮುಗಿಸು. ಇಲ್ಲದಿದ್ದರೆ ನಾನೇ ನೋಡಿಕೊಳ್ಳುವೆ." ಎಂದುಬಿಟ್ಟೆ. ಆ
ಯಮ ಧೈರ್ಯ ನನಗೆಲ್ಲಿಂದ ಬಂದಿತ್ತೋ ದೇವರಿಗೇ ಗೊತ್ತು. ಉಳಿದ
ಹಣವನ್ನು ಕರವಸ್ತ್ರದಲ್ಲಿ ಕಟ್ಟಿ ನನ್ನ ಜಾಕೆಟ್ಟಿನೊಳಗಿಟ್ಟುಕೊಂಡೆ. ಮನೆ
ಯಲ್ಲಿಟ್ಟರೆ ಅದು ಹಣಗಳ್ಳರ ಪಾಲು ಎಂಬುದು ಗೊತ್ತಿತ್ತು. ಆದ್ದರಿಂದ
ಹೃದಯದ ನೆಲೆಯಲ್ಲಿ ಸುಭದ್ರಪಡಿಸಿದೆ. ಈವರೆಗೆ ಸಾಮಾಜಿಕ ವ್ಯವಹಾರ
ಅರಿತ ನನ್ನ ಕಟ್ಟೆಚ್ಚರ ಹಣ ಉಳಿಸಿತು.

* * * *

ಫ್ಯಾಕ್ಟರಿಯ ಅಧಿನಿಯಮದಂತೆ ಇಪ್ಪತ್ತು ಸಾವಿರ ನನಗೆ ಕೊಡ
ಲಿತ್ತು. ಅದನ್ನು ಹೊಡೆದುಕೊಳ್ಳಲು ಅಣ್ಣ ಶತ ಪ್ರಯತ್ನ ಪಟ್ಟ.
ಅದಕ್ಕೆ ನನ್ನ ಸಹಿ ಬೇಕಿಲ್ಲದಿದ್ದರೆ ಅದು ಅವನ ಪಾಲಾಗುತ್ತಿತ್ತೇನೋ....
ತನ್ನಿಂದ ಏನೆಲ್ಲ ಸಾಧ್ಯವೋ ಆ ಉಪಾಯಗಳನ್ನೆಲಾ ಈಗಿನಿಂದಲೇ ಮಾಡ

ಹತ್ತಿದ. ಉತ್ತರ ಕ್ರಿಯಾದಿಗಳಿಗೆ ಹಣಬೇಕೆಂದು ಒತ್ತಾಯಿಸಿದ. ನಾನು ನನಗೆ ಬಂದ ಹಣವನ್ನು ಬ್ಯಾಂಕಿಗೆ ಹಾಕಿ ನನ್ನ ಖರ್ಚಿಗೆ ಇನ್ನೂರು ರೂಪಾಯಿಗಳನ್ನು ಮಾತ್ರ ಇಟ್ಟುಕೊಂಡಿದ್ದೆ. ಈಗಾಗಲೇ ಬ್ಯಾಂಕಿಗೆ ಹೋದಳೆಂದು ನನ್ನ ಮೇಲೆ ಗುಲ್ಲೋಗುಲ್ಲು !

"ಉತ್ತರ ಕ್ರಿಯಾದಿಗಳು ಬೇಕಿಲ್ಲ. ಕಾವೇರಿಯಲ್ಲಿ ಭಸ್ಮವಿಸರ್ಜನೆ ಮಾಡಿದರೆ ಸಾಕು." ದೃಢಕಂಠದಿಂದ ನಾನು ಹೇಳಿದೆ.

ತಿಥಿ ಮಾಡಬೇಕೆಂದು ಅಣ್ಣ ತಮ್ಮಂದಿರು ನನ್ನಮೇಲೆ ಮುಗಿಬಿದ್ದರು. ಪರಿಸರದವರೂ ಒತ್ತಾಯಿಸಿದರು. ಯಾರಮಾತಿಗೂ ನಾನು ಕಿವಿಗೊಡದೆ ನಿರುತ್ತರೆಯಾದೆ. ನಾಲ್ಕು ಮಕ್ಕಳ ವಿದ್ಯಾಭ್ಯಾಸವೊಂದೇ ನನ್ನ ಚಿಂತನೆಗೆ ವಸ್ತು. ಅಣ್ಣನಿಗೆ ನನ್ನನ್ನು ಸಿಗಿದು ಬಿಡುವಷ್ಟು ರೋಷ! ಸಂಪ್ರದಾಯದ ಹೆಸರಿನಲ್ಲಿ ತರಾಟೆಗೆ ತೆಗೆದುಕೊಂಡ. ಪರಿಸರದವರನ್ನೂ ಛುಗಿಲೇಳಿಸಿದ.

ಎಲ್ಲಕ್ಕೂ ಮೂಕಮೌನಿ ನಾನು.

ಕೆಲವು ದಿನಗಳಲ್ಲಿ ಅಣ್ಣ ಫ್ಯಾಕ್ಟರಿಯ ಅಧಿಕಾರಿಗಳನ್ನು ಸಂಪರ್ಕಿಸಿ ನನ್ನ ತಂಗಿ ಏನೇನೂ ಅರಿಯದ ಹುಂಬಳು. ನೀವು ಉತ್ತರ ಕ್ರಿಯಾದಿಗಳಿಗೆ ನೀಡಿದ ಹಣವನ್ನು ನುಂಗಿದ್ದಾಳೆ. ಮುಂದೆಯೂ ಇಪ್ಪತ್ತು ಸಾವಿರವನ್ನು ನುಂಗುವವಳೇ. ಆದ್ದರಿಂದ ಹಣವನ್ನು ನನ್ನ ಕೈಗೆ ನೀಡಿದರೆ ನಾನು ಮಕ್ಕಳ ಜೀವನಕ್ಕೆ ಆಧಾರವಾಗುವೆ ಎಂದು ಮುಂತಾಗಿ ಕೇಳಿಕೊಂಡ ! ಅವನಿದುವರೆಗೆ ನನ್ನ ಒಂದಿನವೂ ಕರೆಸಲಿಲ್ಲ. ವಿಚಾರಿಸಲಿಲ್ಲ. ಈಗ ಅವನ ಚಟುವಟಿಕೆ ಕೋಡಿದರೆ ಆಶ್ಚರ್ಯ-ಪರಮಾಶ್ಚರ್ಯ ! ಹಣವೆಂದರೆ ಹೆಣ ಬಾಯಿಬಿಡುತ್ತೆ ಎಂಬ ಗಾದೆಯೆಷ್ಟು ಸಮಂಜಸ ?

* * * *

ಇಷ್ಟಕ್ಕೆ ಮುಗಿಯಲಿಲ್ಲ ಈ ಪ್ರಕರಣ.

ನನ್ನಿಂದ ಹಣವನ್ನು ಸಾಲವಾಗಿ ಪಡೆಯಲು ಅಣ್ಣತಮ್ಮಂದಿರು ಮಾತ್ರವಲ್ಲ ; ಇತರ ಅನೇಕರು ಪ್ರಯತ್ನಿಸಿದರು. ಅತೀ ಬಡ್ಡಿಯ ಆಮಿಷವನ್ನೂ ತೋರಿದರು. ಅವರೆಲ್ಲರ ಯಾವೊಂದು ಉಪಾಯವೂ ನಡೆಯದಾಗ ಎಲ್ಲರೂ ಕುಚೋದ್ಯ-ಕೆಟ್ಟ ಮಾತುಗಳ ಮಳೆ ಕರೆದು ಒಬ್ಬೊಬ್ಬರಾಗಿ ಗಂಜರಿಯ ತೊಡಗಿದರು. ನನ್ನಿಂದ ಮನೆಯನ್ನಾದರೂ ಹೊಡೆದು

ಕೊಳ್ಳಬೇಕೆಂದು ಪ್ರಯತ್ನಿಸಿದ ಪ್ರಯತ್ನವೂ ಕಡಿಮೆಯದಲ್ಲ. ನಾನ ಮಕ್ಕಳ ಸಹಾಯದಿಂದ ಸಣ್ಣ-ಪುಟ್ಟ ರಿಪೇರಿ ಮಾಡಿಕೊಂಡು ಮನೆಗೊಂದ ಸುರೂಪ ಕೊಟ್ಟನಂತರ ಚಿತ್ರಕಲಾಭಿವೃದ್ಧಿಗೆ ಗಮನ ಕೊಟ್ಟೆ.

'ಕಲೆಗಾಗಿ ಬದುಕು' ಎಂದರೆ ನನ್ನನ್ನೇ ಅರ್ಪಿಸಿಕೊಂಡೆ. ನಾನಿದ ವರೆವಿಗೂ ನನ್ನ ಹೆಸರನ್ನು ನಿಮಗೆ ನಿವೇದಿಸಿಕೊಳ್ಳಲಿಲ್ಲ. ನನ್ನ ಹೆಸರು ಚಂದ್ರ ಕಲಾ. ಕಲೆಗಾಗಿ ಬದುಕನ್ನು ರೂಪಿಸಿ ಕೊಂಡದ್ದು ಈಗಲೇ. ತನುಮನ ಗಳಲ್ಲಿ ಕಲೆ ಪುನರಪಿ ವ್ಯಾಪಿಸಿದಾಗ ನಾನು ನನ್ನನ್ನು ಮರೆತು ಬಿಟ್ಟದ್ದೆ ಮುಂದಿನ ವರಾಂಡದಲ್ಲಿ ಕಲಾಶಾಲೆಗಾಗಿ ಬೇಕು ಬೇಕಾದ ಪರಿಕರಣವನ್ನು ಹೊಂದಿಸಿ ಕೊಂಡು 'ಚಂದ್ರಕಲಾ ಚಿತ್ರಶಾಲೆ' ಎಂಬ ಹಣೆ ಪಟ್ಟಿಯನ್ನು ಹಚ್ಚಿದೆ. ನಾಲ್ಕಾರು ಮಕ್ಕಳಿಗೆ ಸ್ಥಳದ ಹೊಂದಿಕೆಯಾಯಿತು. ಇನ್ನೂ ಕೆಲವು ಪರಿಕರಣಗಳು ಬೇಕಾಗಿದ್ದುವು. ಅವನ್ನು ಮೂರು ದಿನಗಳಲ್ಲಿ ತಯಾರಿಸಿ ಕೊಡುವೆ ಎಂದಿದ್ದ ಬಡಗಿ.

ಇತಿಮಧ್ಯೆ, ಫ್ಯಾಕ್ಟರಿಯಿಂದ ನನಗೆ ಜೀವನಾಂಶ ಐವತ್ತು ಸಾವಿರ ಕೊಡಬೇಕಾಗಿದ್ದು ಇನ್ನುಳಿದ ಹಣವನ್ನು ಅದೇ ನುಂಗಿ ಹಾಕಿತೆಂದು ಜನರ ಅಂಬೋಣ. ನಾನದಕ್ಕೆ ಬೆದರಲಿಲ್ಲ. ಈ ಕಾಸುಗಳ್ಳ ಜಗತ್ತಿನಲ್ಲಿ ಅದರ ಸಾಧ್ಯತೆ ಎಲ್ಲಾ ಕಡೆಯೂ ಇದ್ದೇ ಇದೆ....ಎಲ್ಲಾ 'ದೇವರಿಗಾಗಿ' ಎಂದು ಆತ್ಮನಿವೇದನೆ ಮಾಡಿಕೊಂಡೆ.

ಚಿತ್ರಶಾಲೆಗೆ ಪರಿಕರಣಗಳನ್ನು ತುಂಬಿಸಿ ಬಾಗಿಲು ತೆರೆದಾಗ ಮಕ್ಕಳು ಸಾಲುಗಟ್ಟಿ ಬಂದರು. ಬಾಗಿಲಲ್ಲಿ ನಿಂತು ನೋಡಿದ ನನ್ನ ಹೃದಯ ಹೆಗ್ಗಡಲಾಯಿತು.

ದೂರಗಮ್ಯದ ಹಾದಿಯ ನೇರಕ್ಕೆ S.S.L.C. ಮತ್ತು ಟೀಚರ್ ಟ್ರೈನಿಂಗ್ ಪ್ರಭಾವಳಿಯ ಕಿರಣಗಳು ಕಾಣಿಸಿಕೊಳ್ಳತೊಡಗಿದುವು.



# ಜಾರ್ಜ್ ಹೊರೇನ್

When Fate Summons
Monarchs must obey

ಊರೆಲ್ಲಾ ಬೆಳ್ಳನೆ ಬೆಳಗಾಯಿತು. ಮೇಲೆಮೇಲೆ ಏರುತಿದ್ದಾನೆ ಬಾಲ ಕೋಮಲ ದಿನಮಣಿ.

ಪಕ್ಷಿಗಳ ಸುಪ್ರಭಾತ ಕಾಲವೂ ಆಗಿ ಹೋಗಿದೆ.

ಜಾರ್ಜ್ ಹೊರೇನ್ ಹಾಸಿಗೆ ಬಿಟ್ಟು ಎದ್ದಾಗ ನಗರಿ ದಿನಚರಿಯನ್ನು ಆರಂಭಿಸಿ ಎಷ್ಟೋ ಹೊತ್ತಾಗಿತ್ತು.

"ಇಂದೇನು ? ನನಗಿಷ್ಟು ನಿದ್ದೆ ?"

ಕಣ್ಣುಜ್ಜಿಕೊಂಡು ಕೈಗಡಿಯಾರದ ಮೇಲೆ ದೃಷ್ಟಿ ಹಾಯಿಸಿದ. ಗಂಟೆ ಹತ್ತು. ದಿನವೂ ಆರು ಗಂಟೆಗೆ ಎದ್ದು ಫ್ಯಾಕ್ಟರಿಗೆ ಹೊರಡುತಿದ್ದ. ಅರವತ್ತು ಮೈಲಿ ದೂರವನ್ನು ಕಾರಿನಲ್ಲಿ ರೊಯ್ಯನೆ ಹೋಗಿ ಬರುತಿದ್ದ. ಇಂದು ಭಾನುವಾರ ಎಂಬುದು ಉದಾಸೀನಕ್ಕೆ ದಾರಿ. ಮುದ್ದು ಮಗಳು ಎಲ್ಲಾ ಇನ್ನೂ ಮಲಗಿಯೇ ಇದ್ದಾಳೆ. ಸೊಗಸಾದ ನಿದ್ದೆಯಲ್ಲಿ ಇತ್ತಣ ಪರಿವೆ ಇಲ್ಲವೇ ಇಲ್ಲ. ಜಾರ್ಜ್ ಹೊರೇನ್ ಪ್ರಾತರ್ವಿಧಿಗಳನ್ನು ಮುಗಿಸಿ ಆನಂದದಿಂದ ಸಣ್ಣಗೆ ಸಿಳ್ಳುಹಾಕುತ್ತ ಅಡಿಗೆಯ ಮನೆಗೆ ಹೋದ. ಅರೆ! ಎಲ್ಲವೂ ಸ್ತಬ್ಧ. ಅಲ್ಲಿ ಯಾರೂ ಕೈಯಾಡಿಸಿಯೇ ಇಲ್ಲ. ಆಶ್ಚರ್ಯ ಚಕಿತನಾಗಿ ಶೌಚಾಲಯ, ಹಿತ್ತಿಲು, ವರಾಂಡ, ಕೊನೆಗೆ ಇಡೀ ಮನೆ ಎಲ್ಲ ಕಡೆಯೂ ಸುತ್ತಾಡಿದ. ಎಲ್ಲಿಯೂ ಸೋಫಿಯಾ ಇಲ್ಲವೇ ಇಲ್ಲ! ಆಶ್ಚರ್ಯಾವೇಗದಿಂದ ಹೃದಯ ಮೃದಂಗ ವ್ಯಾಪ್ತಿಗೆ ಮೀರಿ ದಡದಡ ಬಡಿಯಿತು. ಕಣ್ಣುಗಳು ಆಶ್ಚರ್ಯ ವಿಸ್ತೃತವಾದುವು.

"ಸೋಫೀ.....ಸೋಫೀ !"

ಆ ಉಚ್ಚದನಿಗೆ ಓಗೊಟ್ಟುದುದು ಸೋಫಿಯಾ ಅಲ್ಲ. ಮಗಳ ಹಿಲ್ಡಾ. ಇದೀಗಷ್ಟೇ ತಿಪ್ಪತಿಪ್ಪ ಹೆಜ್ಜೆ ಹಾಕಬಲ್ಲವಳಾದ ಹಿಲಾ ಮುದ್ದಿನ ಅರಗಿಣಿ. ಹಾಸಿಗೆಯಲ್ಲೇ ಎಳೆದನಿಯ ರಾಗ ಹರಿಸಿದಳು ಹಾಸಿಗೆಯಿಂದ ಹೊರಳಿ ಕೆಳಗೆ ಬಿದ್ದಾಳೆಂದು ಓಡಿಬಂದು ಎತ್ತಿಕೊಂ ಜಾರ್ಜ್. ಗೆಳತಿಯರ ಮನೆಗೆ ಅಥವಾ ಬಂಧುಗಳಲ್ಲಿಗೆ ಹೋಗಿರಬಹ ದೇನೋ ಎಂದುಕೊಂಡರೂ ಒಳದನಿಯು ಅರ್ಥೈಸುವುದೇ ಬೇರೆ. ಹಿಂದ ಗಡೆಯ ಬಾಗಿಲನ್ನು ಹೊರಗಡೆಯಿಂದ ಹಾಕಿಕೊಳ್ಳುವ ತಾಂತ್ರಿಕ ಜ್ಞಾನ ವಿತ್ತು ಅವಳಿಗೆ. ಬಾಗಿಲನ್ನು ಭದ್ರಪಡಿಸಿಕೊಂಡು ಹೋಗಿರುವ ರೀತಿ ಏನೋ ಒಂದು ವಿಶೇಷವನ್ನೇ ಎತ್ತಿ ತೋರುತ್ತದೆ, ಎಂಬುದು ಹೃದ್ಯ.

ಮನಃಚಿತ್ತಗಳನ್ನು ಆಲೋಚನಾಗಾರಕ್ಕೆ ಕೊಟ್ಟು ಮಗುವಿಗೆ ಹಾಲು ಕುಡಿಸುವ ಕೆಲಸ ಕೈಕೊಂಡ. ದಿನವೂ ಹಾಲು ಕುಡಿಯಲು ರಂಪಾಟ ಮಾಡುತಿದ್ದ ಮಗು ಇಂದು ಸರಾಗವಾಗಿ ಕುಡಿದಳು. ಬಹಳ ಹೊತ್ತಾಗಿದ್ದುದರಿಂದ ಹಸಿವಾಗಿತ್ತು. ಒತ್ತಾಯಿಸಿ ಹಾಲು ಕುಡಿಸುವ ಪ್ರಸಂಗ ತಪ್ಪಿತು. ತನಗಾಗಿ ಬ್ರೆಡ್ ಟೋಸ್ಟ್-ಚಹ ತಯಾರಿಸಿಕೊಂಡ. ಮಗುವಿಗೂ ಬ್ರೆಡ್‌ಕೊಟ್ಟು ತನ್ನ ಉಪಹಾರ ಮುಗಿಸಿದ. ದಿಗ್ಭ್ರಮೆ ಹೊಂದಿದ ಮನಸ್ಸಿಗೆ ಮಡದಿಯ ಸಾಮಿಪ್ಯವಿನಾ ಮತ್ತೊಂದು–ಮಗ ದೊಂದು ಬೇಡವೇ ಬೇಡ ಎಂಬಷ್ಟು ದುಃಖ-ಸಂಕಟ. ತನಗೆ ತಿಳಿದ ಕಡೆ ಗಳಿಗೆಲ್ಲಾ ಟೆಲಿಫೋನಿನ ಸಂಪರ್ಕ ಹೊಂದಿದ. ಎಲ್ಲಿಯೂ ಮುದ್ದು ಮಡದಿಯ ಸುದ್ದಿ ಕೇಳಿ ಬರಲಿಲ್ಲ. ತಕ್ಷಣ ಮಗುವನ್ನೆತ್ತಿಕೊಂಡು ಮಾರ್ಕೆಟ್ ಕಡೆ ಹೋದ. ಅನೇಕ ವೇಳೆ ಬೆಳಿಗ್ಗೆ ಮುಂಜಿಯೇ ಮಾರ್ಕೆಟ್ಟಿಗೆ ಹೋಗುತಿದ್ದಳು ಸೋಫಿಯಾ. ಇವನು ಅಪರೂಪಕ್ಕೆ ಮಾರ್ಕೆಟ್ಟಿಗೆ ಬಂದುವನ್ನು ಗಮನಿಸಿದ ಅನೇಕ ಮಂದಿ 'ಹಾಯ್ !' 'ಬಾಯ್'ಗಳ ವಿನಿಯೋಗದೊಡನೆ ಮುಗುಳು ನಗೆ ಹರಿಸಿದರು. ಸ್ನೇಹ ಸರಣಿ ಹರಿದಾಡಿತು ಅಲ್ಲಲ್ಲಿ.

"ಮಗುವೇಕಪ್ಪಾ ಕರೆತಂದೆ ?" ಎಂದರು ಯಾರೋ.

ಅವನ ಬಾಚದ ಕೂದಲನ್ನು ಕಂಡು ಅಚ್ಚರಿಯಿಂದ ಕೇಳಿದ ಗೆಳೆಯ ಏನಪ್ಪಾ, ನೀನೇ ಬಂದಿದ್ದಿ ? ಸೋಫಿಯಾ ಎಲ್ಲಿ ? ಥಂಡಿ ಹೊತ್ತಿನಲ್ಲಿ ಮಗುವಿನೊಂದಿಗೆ ಬಂದಿದ್ದೀಯೆ !"

"ಅವ.....ಳು ಅಕ್ಕನ ಮನೆಗೆ....ಹೋಗಿದ್ದಾಳೆ." ಹೇಳಲಾರದೇ ಹೇಳಿದ ಜಾರ್ಜ್.

"ಎಂತಹ ಮುದ್ದಾದ ಮಗು ! ನೀನು ಪುಣ್ಯವಂತ ಕಣಯ್ಯಾ."

ಆ ಮಾತು ಎದೆಯಾಳಕ್ಕೆ ಇಳಿಯಿತು ; ನರನರಗಳೂ ನೋವಿನಿಂದ ಮುಯ್ಯಲಿಡುವಂತೆ. ಕರ್ತವ್ಯ ಕುತೂಹಲಿತ ದೃಷ್ಟಿ ಮಾರ್ಕೆಟ್ಟಿನ ಉದ್ದಗಲಕ್ಕೂ ಹರಿದಾಡಿತು. ಎಲ್ಲಿಯೂ ಮಡದಿಯ ಸುಳಿವಿಲ್ಲ. ಊರು ಸಣ್ಣದಾದುದರಿಂದ ಮಾರುಕಟ್ಟೆಯೂ ಸಣ್ಣದೇ. ಅಲ್ಲಿ ಹೆಚ್ಚು ಹೊತ್ತನ್ನು ವ್ಯಯಿಸುವ ಅಗತ್ಯವಿಲ್ಲವೆಂಬುದು ಮನೋಗತ.

"ಹಾಯ್ ! ಜಾರ್ಜ್ ! ಎಂತಹ ಸುಂದರವಾದ ಮಗು !"

ಬೆರಳು ಚೀಪುತಿದ್ದ ಮಗುವಿನ ಮುಖವನ್ನು ಮುದ್ದಿಟ್ಟು ಮೋರೀನ್ ಹೇಳಿದಳು "ಎಲ್ಲಪ್ಪಾ, ಸೋಫಿಯಾ ? ಅವಳನ್ನು ನೋಡದೆ ತುಂಬಾ ದಿನಗಳಾದುವು....."

"ಓ..... ಉಪಾಧ್ಯಾಯಿನಿಯರಿಗೆ ಬಿಡುವು ಸಿಗುವುದು ಹೇಗೆ ?"

"ನಿಜ....ನಿಜ. ನನಗಿಂತಹದೊಂದು ಮಗು ಸಿಕ್ಕಿದ್ದರೆ.....?"

"ತೆಗೆದುಕೊ....." ಎನ್ನುವ ನುಡಿ ತುದಿ ನಾಲಿಗೆಯವರೆಗೂ ಬಂದು ಹಿಂದೆ ಸರಿಯಿತು. ಅವಳು ಮತ್ತೊಮ್ಮೆ ಮಗುವನ್ನು ಮುದ್ದಿಟ್ಟು ವ್ಯಾಪಾರದತ್ತ ಗಮನಕೊಟ್ಟಳು. ಜಾರ್ಜ್ ಹೊರೇಸ್ ಅಲ್ಪಸ್ವಲ್ಪ ವ್ಯಾಪಾರ ಮಾಡಿ ಕೈ ಬುಟ್ಟಿಯೊಂದಿಗೆ ಮನೆಗೆ ಹಿಂದಿರುಗಿ ಬಂದ. ಇಷ್ಟರೊಳಗಾಗಿ ಸೋಫಿಯಾ ಅಡಿಗೆ ಮಾಡಿರುತ್ತಾಳೆ ಎಂಬ ಯೋಚನೆ ಮನದಲ್ಲಿ. ದೂರದಿಂದಲೇ ಕಾಣಿಸಿತು ಬಾಗಿಲಿಗೆ ಬಿದ್ದ ಬೀಗ. ಒಡನೆ ಒಡಲೆಲ್ಲ ಸಂಕಟ. ತಮ್ಮಿಬ್ಬರ ನಡುವೆ ಎಂದೂ ಅಭಿಪ್ರಾಯ ಭೇದ ಬಂದಿರಲಿಲ್ಲ. ಅವಳು ಹೇಳಿಕೇಳದೆ ಹೊರಡುವಂತಹ ಕಾರಣವೇನೂ ತೋರಲಿಲ್ಲ. ರಾತ್ರಿ ಊಟ ಮಾಡಿ ಖುಷಿಯಿಂದ ಮಾತುಕತೆಯಲ್ಲಿ ಹೊತ್ತು ಕಳೆದು ಆನಂದದಿಂದ ಹಾಸಿಗೆ ಸೇರಿದವಳು ಹೇಳದೆ ಕೇಳದೆ

ಅಪರಾತ್ರಿಯಲ್ಲಿ ಹೊರಟು ಹೋದಾಳೆಂದು ಭಾವಿಸುವುದಾದರೂ ಸಾಧ್ಯವೇ ? ಎಷ್ಟು ಯೋಚಿಸಿದರೂ ವಿಷಯ ಒಗಟಾಗಿಯೇ ಉಳಿಯಿತು. ಬೇರೆ ಯಾವೊಬ್ಬನ ಬೆನ್ನು ಹಿಡಿದಿರಬಹುದೇ ? ಅಂತಹ ವ್ಯಕ್ತಿ ಯಾರು ಇಲ್ಲಿ ? ಶಾಲೆಯಲ್ಲೂ ಎಲ್ಲಾ ಲೇಡಿ ಟೀಚರ್‌ಗಳೇ ಇರುವುದರಿಂದ ಅನುಮಾನಕ್ಕೆ ಆಸ್ಪದವೇ ಇಲ್ಲ. ಆದರೂ ಹೀಗಾಗಲು ಕಾರಣ ?

ಹಗಲು ಅಶಾಂತಿಯಿಂದ ಉರುಳಿತು. ರಾತ್ರಿ ಸಂಕಟದಿಂದ ಕಳೆಯಿತು.

ಆಂತರಂಗಿಕ ತುಮುಲವನ್ನು ಭರಿಸಲಾರದೇ ಶಾಲೆಗೊಮ್ಮೆ ಹೋಗಿ ಬರುವೆ ಎಂದುಕೊಂಡು ಶಾಲೆಯ ಕಡೆಗೆ ರೊಯ್ಯನೆ ಕಾರು ಬಿಟ್ಟ. ಮಗು ಹಸಿವಿನಿಂದ ಪರಿತಪಿಸುತಿತ್ತು. ಬ್ರೆಡ್ಡು–ಬಿಸ್ಕತ್ತುಗಳ ನೈವೇದ್ಯ ಏನೇನೂ ಸಾಲದು. ಒಳ್ಳೆಯ ಊಟ ಬೇಕೇ ಬೇಕು. ಕಾರು ಶಾಲೆಯ ಆವರಣವನ್ನು ಪ್ರವೇಶಿಸುತ್ತಲೂ ಜವಾನ ಕೇಳಿದ "ಮೇಡಂ ಏಕೆ ಬರಲಿಲ್ಲ ? ಮೈಗೆ ಹುಷಾರಿಲ್ಲವೇ ?"

ಆ ಪ್ರಶ್ನೆ ಮನಸ್ಸಿಗೆ ಮುಳ್ಳು ಮುರಿಯಿತು. ಏನನ್ನೋ ಹೇಳಲು ತೊದಲಿದ. ಮಾತು ಸರಿಯಾಗಿ ಹೊರಡಲಿಲ್ಲ. ಅವಳ ತರಗತಿಯ ಕಡೆಗೆ ದೃಷ್ಟಿಯನ್ನು ಹೊರಳಿಸಬಾರದೆಂದರೂ ವಂಚಿಸಿತು ಕಣ್ಣು. ಬೇರೆ ಯಾರೋ ಪಾಠ ಮಾಡುತಿದ್ದುದು ದೃಷ್ಟಿಗೆ ಬಿತ್ತು. ಅದೇ ಕಿಟಕಿಯಿಂದ ಅನೇಕ ಮಕ್ಕಳ ಚುಚ್ಚು ನೋಟ ಇತ್ತಲೇ ಹೊರಳಿದ್ದುದು ಕಂಡುಬಂತು. ಜಾರ್ಜ್ ಹೊರೇನ್ ಕಾರನ್ನು ಸದ್ದಿಲ್ಲದೆ ಹಿಂದಿರುಗಿಸಿದ.

ಮುಂದಿನ ಕದ ಮುಚ್ಚಿ ಅಡಿಗೆ ಮನೆ ಸೇರಿ ಮಗುವಿಗೆ ಹಾಲಿನ ಸೀಸೆ ಕೊಟ್ಟು ಅಡಿಗೆ ಆರಂಭಿಸಿದ. ತನಗೆ ತಿಳಿದಂತೆ ಯಾವುದೋ ಸುಲಭದ ಖಾದ್ಯ ತಯಾರಾಯಿತು. ಮಗುವಿನ ಕಾಲ ಪ್ರವೃತ್ತಿ ಬಟ್ಟೆಯಲ್ಲೇ ಆಗಿತ್ತು. ಮಡದಿಗೆ ಹಿಡಿಶಾಪ ಹಾಕುತ್ತಲೇ ಮಗುವಿನ ಬಟ್ಟೆಗಳನ್ನು ಸ್ವಚ್ಛಗೊಳಿಸಿ ಸ್ನಾನ ಮಾಡಿಸಿದ. ಮಗು 'ಮ್ಮಮ್ಮಮ್ಮಾ.....' ಎಂದು ಅಳುತ್ತಲೇ ಇತ್ತು. ತಾನು ಎಷ್ಟು ಸಂತೈಸಿದರೂ ಅದು ಬಯಸುವುದು ಅಮ್ಮನನ್ನೇ ಎನಿಸಿದಾಗ ಒಮ್ಮೆ ಸಿಟ್ಟು ಬಂದಿತು. ಎಳೆ ಮಗು ಹೊಡೆಯುವಂತೆಯೂ ಇಲ್ಲ. ಊಟವನ್ನು ಕ್ರಮವತ್ತಾಗಿ ಮಾಡದ ಮಗು. ಅಷ್ಟಿಷ್ಟು

ತಿನ್ನಿಸುತ್ತಾ ಲಲ್ಲೆಗೈದು ಮುದ್ದುಮಾಡಿ ಆಹಾರ ಪೂರೈಸಬೇಕು. ಅದೊಂದು ದೊಡ್ಡ ಕಷ್ಟ. ಮಡದಿ ಶ್ರಮದಿಂದ ತಿನ್ನಿಸುತಿದ್ದುದು ನಿಜ. ತಾನೀಗ ಹೊಟ್ಟೆ ತುಂಬ ತಿನ್ನಿಸದಿದ್ದರೆ ಮಗುವಿನ ಅಳು ಗೋಳು ಇದ್ದದ್ದೆ. ತಾನು ತಿನ್ನುತ್ತಲೇ ಅದಕ್ಕೂ ತಿನ್ನಿಸಿದ. ಮ್ಮಮ್ಮಮ್ಮಾ....! ಎನ್ನುತ್ತಲೇ ನುಂಗಲಾರದೇ ನುಂಗಿತು ಮಗು. ಮಡದಿಗೆ ಮತ್ತೆ ಮತ್ತೆ ಶಾಪ ಹಾಕಿದ. ರೋಷೋದ್ದೀಪನದಿಂದ ಕಣ್ಣುಗಳು ಕಿಡಿಕಾರಿದುವು. ಮಗು ಬೆಳಗ್ಗೆ ಬಹಳ ಹೊತ್ತು ಮಲಗಿದ್ದುದರಿಂದ ಮತ್ತೆ ಮಲಗದು. ಕೈಗೆ ಸಿಕ್ಕಿದುದನ್ನೆಲ್ಲಾ ಕಿತ್ತು ಚೆಲ್ಲಾಡುವುದರಲ್ಲಿ ನಿಮಗ್ನ. ಹಿಂದು ಮುಂದಿನ ಎರಡೂ ಬಾಗಿಲುಗಳ ಬೋಲ್ಟ್ ಜಡಿದು ಹಾಸಿಗೆಯ ಮೇಲೆ ಅಡ್ಡಾದ. ಮನಸ್ಸು ಸೋಫಿಯಾಳ ಸುತ್ತಮುತ್ತ ಹರಿದಾಡುತಿತ್ತು. ಅವಳ ಮುದ್ದು ಮನ ಮುಗ್ಧತೆಯಲ್ಲಿ ಕಿಂಚಿತ್ತಾದರೂ ವಕ್ರಭಾವನೆ ಈವರೆಗೆ ಕಂಡುದಿಲ್ಲ. ಅವಳಿಗೆ ಕಷ್ಟವಾದರೂ ಏನಿತ್ತು ? ಮುದ್ದಾದ ಸಂಸಾರ. ಮುದ್ದು ಮುದ್ದಾದ ಮಗು. ಹೀಗಿದ್ದೂ ಸಹ ಹೊರಟು ಹೋದಳೇಕೆ ? ಅಸಡ್ಡೆ-ನಿರ್ಲಕ್ಷ್ಯ-ಕೋಪ-ತಾಪಗಳು ಎಂದೂ ಈ ಬಳಿಯಲ್ಲಿ ಸುಳಿದಿರಲಿಲ್ಲ. ಅಂದಮೇಲೆ ಏಕಾಏಕಿ ಹೋಗಿ ಬಿಡಲು ಕಾರಣ ? ಅದೇ ಅರ್ಥವಾಗದ ವಿಷಯ. ಒಮ್ಮೊಮ್ಮೆ ಬಿಟ್ಟು ಹೋದ ದುಷ್ಟೆಯನ್ನು ಏಕೆ ನೆನೆಯಬೇಕು ಎಂಬ ಪ್ರತಿಭಟನೆಯೂ ಏಳುತ್ತದೆ ಮನದಲ್ಲಿ. ಅದೆಲ್ಲಾ ಒಂದೆರಡುಗಳಿಗೆ ಮಾತ್ರ. ಅನಂತರ ಅದೇ ಮನಸ್ಸಿನ ದಿಗ್ಸೂಚಿಯ ಮುಳ್ಳು ನಿಲ್ಲುತಿದ್ದುದು ಆ ಸಂಕಟಕಾರಕ ಬಿಂದುವಿನಲ್ಲೇ ಸೋಫಿ. ಸೋಫಿ. ಸೋಫೀ ! ನೀನು ಎಲ್ಲಿಗೆ ಹೋಗಿಬಿಟ್ಟೆ ? ನನ್ನ ಬಿಟ್ಟು ಹೋಗಲು ಕಾರಣವಾದರೂ ಏನು ? ಎಷ್ಟೇ ತೊಂದರೆಯಾದರೂ ಸಹಿಸಕೊಳ್ಳಬಲ್ಲೆ. ನಿನ್ನ ಬಿಟ್ಟಿರಲಾರೆ..... ಎಂದೆಲ್ಲಾ ಪರಿತಪಿಸುತ್ತದೆ ಮನಸ್ಸು. ನರನರಗಳೂ ನರಳುತ್ತವೆ. ಹೃತ್ ತಂತುಗಳು ದುಃಖಾರ್ತತೆಯಲ್ಲಿ ಹುಯ್ಯಲಿಡುತ್ತವೆ. ಕಣ್ಣುಗಳಲ್ಲಿ ಕಂಬನಿ ತನಗರಿಯುದಂತೆಯೇ ಇಳಿದು ಹೋಗುತ್ತದೆ. ಹಾ ! ಎಂತಹ ಕಷ್ಟ ಕೊಟ್ಟು ಹೋದಳು ಸೋಫಿಯಾ ! ಪ್ರೀತಿ ಪಡೆದುದು ಮೋಸ ! ಬಾರೀ ಮೋಸ !

*    *    *    *

ಆ ದಿನವೆಲ್ಲಾ ಮಗುವನ್ನು ಸುಧಾರಿಸಬೇಕಾದರೆ ಸಾಕು ಬೇಕ
ಯಿತು. ಹೊರಗಡೆ 'ಸಟಕ್' ಎಂದು ಸಣ್ಣ ಸದ್ದು ಮೂಡಿದರೂ ಸೋ
ಬಂದಳೇನೋ ಎಂದು ಕಣ್ಮನಗಳು ಹೊರಳುತ್ತವೆ ಅತ್ತ. ಮತ್ತೆ ಮರ
ಗಳಿಗೆಯಲ್ಲೇ ನಿರಾಸೆ ಕಟ್ಟಿಟ್ಟ ಬುತ್ತಿ. ಅಡಿಗೆ ಮನೆಯ ಅವ್ಯವಸ್ಥೆ
ಕೈಬೀಸಿ ಕರೆಯುತ್ತದೆ. ಮೇಲಾಗಿ, ಮಗುವಿನ ಅಳುವಿನ ಕರಕರೆ
ಮತ್ತೆಮತ್ತೆ ಕಾಲ ಪ್ರವೃತ್ತಿಯ ಗೋಳು. ಬಿಡುವಿಲ್ಲದಷ್ಟು ಅಳು
ಮ್ಮ್ರಮ್ಮ್ರಮ್ಮ್ರಮ್ಮಾ್ರ ಕರೆ. ಜಾರ್ಜ್ ಹೊರೇನ್ ಒಂದೇ ದಿನಕ್ಕೆ ಬಳಲಿ
ಹೈರಾಣಾದ.

ಕೆಲಸಕ್ಕೆ ಒಂದು ದಿನದ ರಜೆಯನ್ನು ಸಂಕಷ್ಟದಿಂದ ಪಡೆದು ಮಗುವಿ
ನೊಂದಿಗೇ ಮಡದಿಯ ತಪಾಸಣೆ ಕೈಕೊಂಡ. ತಾನರಿತಿದ್ದ ದಿಕ್ಕುದೆಶೆ
ಗಳನ್ನೆಲ್ಲಾ ಶೋಧಿಸಿದ್ದಾಯ್ತು. ಎಲ್ಲಿಯೂ ಸುಳಿವು ಸಿಗಲಿಲ್ಲ. ಮನೆ
ಯಲ್ಲಿ ಏನಾದರೂ ಚೀಟಿಯನ್ನು ಬಿಟ್ಟು ಹೋಗಿದ್ದಾಳೆಯೇ ಎಂದು ಇಡೀ
ಮನೆಯನ್ನೇ ಅಡಿಮೇಲು ಮಾಡಿದ. ಚೀಟಿ ಸಿಗಲಿಲ್ಲ. ಮತ್ತಾವ ಸುಳಿವೂ
ಇಲ್ಲ. ಮಂತ್ರಮಾಯವಾದಂತೆ ಗೂಢಾತಿಗೂಢ ಮಡದಿಯ ಕಣ್ಮರೆ.

ಜಾರ್ಜ್ ಹೊರೇನ್ ಕಂಗಾಲಾದ.

ಮರುದಿನ ಕೆಲಸಕ್ಕೆ ಹೊರಡುವುದು ಅನಿವಾರ್ಯ. ನಿದ್ದೆ ಮಾಡಿದ್ದ
ಮಗುವನ್ನೆತ್ತಿ ಕಾರಿನಲ್ಲಿ ಮಲಗಿಸಿಕೊಂಡು ಫ್ಯಾಕ್ಟರಿಗೆ ಹೋದ. ಮಕ್ಕ
ಳನ್ನು ನೋಡಿಕೊಳ್ಳುವ ತಾಯಂದಿರ ವಶಕ್ಕೆ ಮಗುವನ್ನು ನೀಡಿ ಫ್ಯಾಕ್ಟ
ರಿಗೆ ಹೋಗಿ ಕೆಲಸಕ್ಕೆ ಹಾಜರಾದ. ಸ್ವಲ್ಪ ಸಮಯದ ನಂತರ ಮನೆಗೆ
ರಿಂಗ್ ಮಾಡಿದ. ಮನೆಗೆ ಮಡದಿ ಬಂದಿರಬಹುದೇ ಎಂದು. ಅನಂತರ
ಶಾಲೆಗೂ ರಿಂಗ್ ಮಾಡಿದ. ಎರಡೂ ಕಡೆಯಿಂದ ಅವಳ ಸುಳಿವಾಗಲಿ,
ಸುದ್ದಿಯಾಗಲಿ ಸಿಗಲಿಲ್ಲ. ಆದರೆ, ಮನದ ತುಡಿಕೆಯಿಂದ ಮನೆಗೆ ಮತ್ತೆ
ಮತ್ತೆ ರಿಂಗ್ ಮಾಡಿದ. ಫೋನ್ ಎತ್ತುವವರೇ ಇಲ್ಲ. ಫ್ಯಾಕ್ಟರಿ
ಯಿಂದ ಮಗುವಿದ್ದಲ್ಲಿಗೆ ಧಾವಿಸಿದರೆ, ಅಪರಿಚಿತ ಮುಖವನ್ನು ನೋಡಿ
ಭಯ ಗಾಬರಗಳಿಂದ ನೊಂದು ನಲುಗಿದ್ದ ಮಗುವಿಗೆ ತಡೆಯಲಾಗದ
ದುಃಖ. ಒಂದೇ ಸಮನೆ ಹುಯ್ಯಲಿಡುವಂತೆ ಅಳತೊಡಗಿತು, ದುಃಖದ
ಕೋಡಿ ಹರಿಸಿ ತಂದೆಯನ್ನು ಎರಡೂ ನಳಿದೋಳುಗಳಿಂದ ತಬ್ಬಿ,

ಹೊರಳು ಕಟ್ಟಿ ಒಡಲ ಸಂಕಟವನ್ನು ತೋಡಿಕೊಂಡಿತು. ಅಳು-ಅಳು ಕೊನೆಗಾಣದ ಅಳು. ಎಷ್ಟೆಷ್ಟು ಮುದ್ದುಗೈದು ಸಮಾಧಾನಿಸಿದರೂ ಸುಮ್ಮನಾಗದು. ಬಿಕ್ಕಳಿಕೆಯನ್ನು ನೋಡಿದರೆ ತನಗೂ ಅಳು ಬರುವಷ್ಟು ಒಡಲ ಸಂಕಟ. ಅತ್ತೂ ಅತ್ತೂ ಕಣ್ಣುಗಳು ಕೆಂಪಾಗಿ ಹೋಗಿವೆ. ಮೊದಲೇ ಕೆಂಪು ಕೆಂಪು ಮುಖ. ಈಗಂತೂ ನೋಡಲಾಗದ ಕಡುಗೆಂಪು. ಊಟ ತಿಂಡಿಯನ್ನು ಮುಟ್ಟಿರದೆ ಹಸಿವಿನಿಂದ ಬಳಲಿತ್ತು ಕೂಡ. ಸಾಕು ತಾಯಿಯ ಪರಿಚಯ ಮಾಡಿಸುವ ಸಲುವಾಗಿ ಅಲ್ಲಿಯೇ ಕುಳಿತು ಹಾಲು ಕುಡಿಸಿದ. ಅವಳೂ ಅಕ್ಕರೆಯಿಂದ ಮುದ್ದುಗೈದು ಮಾತಾಡಿಸತೊಡಗಿದಳು.

"ಮುದ್ದು ಹಿಲ್ಡಾ ! ಮೈ ಡಿಯರ್ ಚೈಲ್ಡ್ ?"

ಮಗು ಅವಳ ಕಡೆ ನೋಡಿ ಮುಖ ತಿರುವಿ 'ಮ್ಮಮ್ಮಮ್ಮಾ.....!' ಎಂದಿತು ಗದ್ಗದಿತ ದನಿಯಲ್ಲಿ. ತಂದೆಯನ್ನು ನೋಡಿ ಆನಂದವಾದರೂ ದುಃಖ ನಿಲ್ಲದು. ಅಳುತ್ತಲೇ ನಕ್ಕಿತು. ನಗುತ್ತಲೇ ಅತ್ತಿತು. ಸಾಕು ತಾಯಿ ಹತ್ತಿರ ಬಂದರೆ ಸ್ಥಾಯಿಸ್ಥಾಯಿಗೇರುತ್ತದೆ ಅಳು. ಜಾರ್ಜ್ ಹೊರೇಸ್ ಮಗುವಿನೊಂದಿಗೆ ಕಾರು ಹತ್ತಿದ. ಪಯಣದುದ್ದಕ್ಕೂ ಮಡದಿಯ ಚಿಂತೆ ಮನಸ್ಸಿಗೆ. ಹಾದಿಯ ಇಕ್ಕೆಲಗಳನ್ನು ತಡಕುವ ಆಸಕ್ತಿ ಕಣ್ಣುಗಳಲ್ಲಿ. ಆದರೇನು ? ಸಲಸಲಕ್ಕೂ ನಿರಾಸೆಯೇ.

ಮಡದಿಯ ಚಿತ್ರಪಟ ಸಹಿತ ಪೋಲೀಸಿಗೆ ದೂರುಕೊಟ್ಟ ಜಾರ್ಜ್ ಹೊರೇಸ್.

ನನ್ನ ಮಾತಿರಲಿ, ಹೆತ್ತ ಮಗುವನ್ನು ಬಿಟ್ಟು ಹೋದಳಲ್ಲಾ ಚಾಂಡಾಳಿ ! ಎಂದು ಸಹಸ್ರನಾಮ ಹಾಕುತ್ತಲೇ ದಿನಚರಿಯಲ್ಲಿ ನಿಮಗ್ನನಾದ. ಮಗುವನ್ನು ಸಂಬಾಳಿಸುವುದು ಕಷ್ಟಕರವಾದಾಗ ಯಾರಿಗಾದರೂ ಕೊಟ್ಟುಬಿಡಲೇ ? ಎಂಬ ಯೋಚನೆಯೂ ಬರುತ್ತದೆ. ಆದರೆ, ಅದಕ್ಕೆ ತನ್ನ ಮೇಲಿರುವ ಅಕ್ಕರೆ ಮ್ಮಮ್ಮಮ್ಮಾ ಮನಮೋಹನೀಯ ಕರೆ ಹೃದಯವನ್ನು ಕಾಣದ ಕೈಗಳಿಂದ ಹಿಂಡುತ್ತದೆ. ಬಿಸಿಲಟ್ಟಿದ ಮಂಜಿನಂತೆ ಕರಗುತ್ತದೆ ಮನಸ್ಸು.

ಅವನು ಕೆಲಸ ಮಾಡುತಿದ್ದುದು ಕಾರ್ಕ್ಸ್ ಟೌನಿನಲ್ಲಿ. ಮಡದಿಯ ಸೌಕರ್ಯಕ್ಕಾಗಿ ಮೇರಿ ಲ್ಯಾಂಡಿನಲ್ಲಿ ಮನೆ ಹಿಡಿದಿದ್ದ. ಇನ್ನು ಮೇರಿ ಲ್ಯಾಂಡ್‌ನಲ್ಲಿರುವ ಅವಶ್ಯಕತೆಯಿಲ್ಲ. ಪ್ರಸ್ತುತ, ಒಂದೆರಡುವಾರ ಅಲ್ಲಿಯೇ ಇದ್ದು ಮಡದಿಯ ತಪಾಸಣೆ ಮಾಡುವುದು ಒಳ್ಳಿತು ಎನಿಸಿ ಅಲ್ಲಿಯೇ ಉಳಿದ. ಆ ಚಿಕ್ಕ ಟೌನಿನ ಒಂದು ಇಂಚು ನೆಲವನ್ನೂ ಬಿಡದೆ ಪರಿಶೋಧಿಸಿ ದ್ದಾಯ್ತು. ಪೋಲೀಸರ ಕಾರ್ಯ ಚಟುವಟಿಕೆ ನೆರೆ ಊರುಗಳಿಗೂ ಹರೆಗೈ ಚಾಚಿತು.

ಎಳೆ ಮಗುವೊಂದಿಲ್ಲದಿದ್ದರೆ ಅವನ ಜೀವನಕ್ಕೆ ಮತ್ತಾವ ತಿರುವು ಮೂಡುತಿತ್ತೋ. ಮಗುವಿನ ಭಾರ ಎಲ್ಲಕ್ಕೂ ಅಡ್ಡಗಾಲು. ವಾರವೊಂದು ಆಳಿದರೂ ಮಗು ಹೊಸ ತಾಯಿಯೊಂದಿಗೆ ಹೊಂದಿಕೊಳ್ಳುತ್ತಲೇ ಇಲ್ಲ. ಮ್ಮಮ್ಮಮ್ಮಾ! ಗೋಳಿನ ಕರೆಯೂ ನಿಲ್ಲಲಿಲ್ಲ. ಮಗುವಿನ ಸಂಕಟ ದಿಂದಾಗಿ ತನಗೂ ಸಂಕಟ_ದುಃಖ-ಪರಿತಾಪ.

ಜಾರ್ಜ್ ಹೊರೇಸ್ ಅತ್ಯಂತ ನಿರುತ್ಸಾಹಿಯಾದ.

ಅನೇಕ ಬಾರಿ ತನ್ನ ತಾಯಿಗೆ ಕಾಗದ ಬರೆಯುಲೇ ಎಂದು ಯೋಚಿ ಸಿಯೂ ಬರೆಯಲಾರದೆ ಸುಮ್ಮನಾಗಿದ್ದ. ಎಲ್ಲಿಯೋ ಅಲಕ್ಷಿತ ಜಡಭರತ ವೃತ್ತಿ ಮೈಮನಗಳನ್ನು ಆಕ್ರಮಿಸಿ ಹೆಡೆಮುರಿಗಟ್ಟಿತ್ತು. ಮುಂದೇನು ? ಎಂಬ ಪ್ರಶ್ನೆ ತಲೆಯಲ್ಲಿ ನಿಮಿರಿ ನಿಂತಿದೆ. ಯೋಚಿಸುವುದರೊಳಗಾಗಿ-ಯೋಚಿಸಿ ನಿರ್ಧರಿಸುವುದರೊಳಗಾಗಿ ದಿನಗಳು ಉರುಳಿ ಹೋಗುತ್ತವೆ. ದುಃಖ-ದುಗುಡಗಳು ಎಣೆಯಾಡಿ ಹೃದಯವನ್ನು ಘಾಸಿಗೊಳಿಸುತ್ತವೆ. ಅವನು ಹೊಸ ದಿನಚರಿಗೆ ಹೊಂದಿಕೊಳ್ಳಲು ಸರ್ವಸಹಸಾ ಹೆಣಗುತ್ತಾನೆ.

ದಿನಗಳು ಒಂದೊಂದಾಗಿ ಉರುಳುತ್ತಲೇ ಇವೆ. ಎಲ್ಲಿಯೂ ಸೋಫಿ ಯಾ—ಳ ಸುಳಿವಾಗಲೀ, ಸುದ್ದಿಯಾಗಲೀ ಇಲ್ಲವೇ ಇಲ್ಲ. ಇನ್ನು ಮನೆ ಯನ್ನು ಫ್ಯಾಕ್ಟರಿಯ ಪರಿಸರಕ್ಕೆ ಸ್ಥಳಾಂತರಿಸುವುದು ಒಳ್ಳೆಯದು ಎನಿಸಿತು. ಆ ಕಾರ್ಕ್ಸ್ ಟೌನಿನಂತಹ ಊರಿನಲ್ಲಿ ಮನೆ ಸಿಕ್ಕುವುದು ಕಷ್ಟವೇ. ಅದಕ್ಕಾಗಿ ಹೌಸಿಂಗ್ ಏಜೆಂಟರ ಬಳಿಗೂ ಹೋಗಿ ಬಂದಿದ್ದ.

ಫ್ಯಾಕ್ಟರಿಯ ಕೆಲಸ ಮುಗಿದ ನಂತರ ಬೇಬಿ ನರ್ಸಿಂಗ್ ಹೋಂ-ಗೆ ಹೋದಾಗ ಮಗು ಏರು ದನಿಯಲ್ಲಿ ಹುಯ್ಯಲಿಡುತಿದ್ದುದು ಹೊರ

ಬಾಗಿಲಿಗೇ ಕೇಳಿಸುತಿತ್ತು. ಜಾರ್ಜ್ ಹೊರೇಸ್-ನ ಕರುಳು ಕರಗಿ ಪ್ರವಿಸಿತು ಮರುಕದಿಂದ. ಒಳಹೋದಕೂಡಲೇ ಮಗು ತಂದೆಯೆಡೆಗೆ ಚಿಮ್ಮಿ ಬಂತು ಚಿಟ್ಟೆಯಂತೆ. ಎರಡೂ ಕಣ್ಣುಗಳಲ್ಲಿ ನೀರು ಇಳಿದು ಹೋಗಿತ್ತು. ಅತ್ತೂ ಅತ್ತೂ ಸುಸ್ತಾಗಿದ್ದಾಳೆ. ಅಂದಿಂದಿಗೂ ಮಗು ಎಷ್ಟೋ ಸೊರಗಿದ್ದಾಳೆ. ಅವಳನ್ನು ನೋಡಿದರೆ ಒಡಲೆಲ್ಲಾ ಸಂಕಟ. ಮಗುವನ್ನು ಎದೆಗೆತ್ತಿಕೊಂಡು ಕಣ್ಣು ಮೂಗುಗಳನ್ನು ಒರಿಸಿದ. ಮಗು ಸಂಕಟದಿಂದಲೇ ನಕ್ಕಿತು. ನಗುತ್ತಲೇ ಬಿಕ್ಕಳಿಸಿತು. ಜಾರ್ಜ್ ಹೊರೇಸ್ ಎದೆಗೊತ್ತಿ ಹಿಡಿದುಕೊಂಡು "ಹಿಲ್ಡಾ ! ನನ್ನ ಮುದ್ದು ಮರಿ ಅಳಬೇಡ!" ಎಂದು ಲಲ್ಲೆಯಾಡಿದ. ಮಗು ಸ್ವಲ್ಪಹೊತ್ತಿನಲ್ಲಿ ಅಳು ನಿಲ್ಲಿಸಿದರೂ ಬಿಕ್ಕಳಿಸುವುದನ್ನು ನಿಲ್ಲಿಸಲಿಲ್ಲ. ಬಹಳ ಹೊತ್ತಿನಿಂದ ಅತ್ತಿದಾಳೆ ಎಂಬುದರ ಕುರುಹಾಗಿ. ಮಗುವಿನ ಸ್ಥಿತಿಯಿಂದ ಅವನ ಕಣ್ಣುಗಳಲ್ಲೂ ನೀರಾಡಿತು.

ಅರವತ್ತು ಮೈಲಿಯ ಹಾದಿ ಕಳೆದು ಮನೆ ಮುಟ್ಟಿದಾಗ ಕ್ರೋಟನ್ ಗಿಡಗಳಾಚೆ ತಲೆಯಲ್ಲಿ ಹ್ಯಾಟ್ ಧರಿಸಿದ ಸ್ತ್ರೀರೂಪ ಕಂಡು ಬಂತು. ಪುಸ್ತಕ ಹಿಡಿದು ಕಲ್ಲು ಬೆಂಚಿನ ಮೇಲೆ ಕುಳಿತಿದ್ದಾಳೆ. ಹಸಿರು ಫ್ರಾಕ್ ತೊಟ್ಟ ಅವಳ ಅಪರದ್ದೇಶ ಮಾತ್ರ ಕಾಣಿಸುತಿತ್ತು. ಎಂಜಿನ್ ನಿಲ್ಲಿಸಿ ಮಗುವನ್ನು ಎತ್ತಿಕೊಂಡು ಒಂದೇ ಹೆಜ್ಜೆಗೆ ಅತ್ತ ಕುಪ್ಪಳಿಸಿದ. ನೋಡಿದರೆ, ಸೋಫಿಯಲ್ಲ; ಸೋಫಿಯ ತಾಯಿ ! ಒಮ್ಮೆಲೇ ಡಂಗು ಬಡಿದಂತೆ ಸ್ತಬ್ಧವಾಯಿತು ಹೃದಯ. ತಕ್ಷಣವೇ ತನ್ನನ್ನು ಸುಧಾರಿಸಿಕೊಳ್ಳುತ್ತ ಕೇಳಿದ,

"ಏನು ಸಮಾಚಾರ ? ಸೋಫಿ ಎಲ್ಲಿ ?"

"ನನಗೊತ್ತಿಲ್ಲ. ನಾನು ಸೋಫಿಯನ್ನು ನೋಡಲು ಬಂದೆ."

ಒಂದು ಗಳಿಗೆ-ಒಂದೇ ಒಂದು ಗಳಿಗೆ ಕಣ್ಣ ಮುಂದಿನ ವಸ್ತುಗಳೆಲ್ಲಾ ಗಿರಗಿರ ಸುತ್ತಿದುವು.

ಜಾರ್ಜ್ ಹೊರೇಸ್ ಏನೂ ಹೇಳಲಿಲ್ಲ.



# ಸುಖ-ದುಃಖ

ಲಲಾಟ ಲಿಖಿತೌ ರೇಖಾ ಪರಿಮಾಷ್ಟುಂ ನ ಶಕ್ಯತೆ ।

ಅದೊಂದು ಬೃಹದ್ ಕಾರಾಗಾರ.

ಸಮವಸ್ತ್ರಧಾರಿಗಳಾದ ಪೋಲೀಸರು ಕೋವಿಗಳ ಸಹಿತ ಗಸ್ತು ತಿರುಗುತ್ತಾರೆ. ಸದ್ದು-ಗದ್ದಲಗಳಿಗೂ ಕೊರತೆಯಿಲ್ಲ. ಹೆಬ್ಬಾಗಿಲಿಗೆ ಸಮೀಪವಾಗಿಯೇ ಜೈಲರ್ ಆಫೀಸು. ಆ ಕಾರಾಗಾರದ ಪಾಪಕೂಪಕ್ಕೆಲ್ಲ ಅಲ್ಲಿ ಅಂಕಿತ ಬೀಳುತ್ತದೆ.

ಅಗಲವಾದ ಹಳೆಯ ಮೇಜು. ಜೇಲಿನ ಮುದ್ರೆಗಳು 'ಸ್ಟಾಂಡ್' ನಲ್ಲಿ ನೇತುಬಿದ್ದಿವೆ.

ಜೈಲರ್ ಕೆಲವು ದಸ್ತಾವೇಜುಗಳಿಗೆ ಸಹಿಹಾಕಿ ಆಫೀಸಿನಿಂದ ಹೊರಬಿದ್ದು ಜೇಲಿನ ಒಳಾಂತರಕ್ಕೆ ನಡೆದ. ಹಳೆಯ ಬೂಟುಗಳು ಲರಕ್ ಲರಕ್ ಸದ್ದು ಮಾಡುತ್ತವೆ. ಆ ಹೆಜ್ಜೆಗಳ ಸದ್ದು ಅಲ್ಲಿ ಮೊಳಗಿದಾಗಲೇ 'ಜೈಲರ್ ನರೇಶ ಬಂದ' ಎಂಬ ಸೂಚನೆಯನ್ನು ಮುಂದಾಗಿಯೇ ಕೊಡುತ್ತವೆ. ಆಗ ಹರಟೆಯಲ್ಲಿ, ಬೀಡಿ ಸೇದುವಲ್ಲಿ ನಿಮಗ್ನರಾದವರು ಅಥವಾ ಅಕೃತ್ಯ-ಅಜ್ಞಾನ-ಅವಜ್ಞೆಗಳ ಹಿಡಿತದಲ್ಲಿ ಸಿಲುಕಿದವರು ತಟ್ಟನೆ ಎಚ್ಚತ್ತುಕೊಳ್ಳುತ್ತಾರೆ; ಖೈದಿಗಳೂ ಕೂಡ, ಜೈಲ್ ಸಿಬ್ಬಂದಿ ಮಾತ್ರವಲ್ಲ.

ಜೈಲರ್ ನರೇಶ್ ಹಿರಿಯ ಅಂಗಳವನ್ನು ದಾಟಿ ವಾರ್ಡುಗಳ ಬದಿಯಲ್ಲಿ ಹೆಜ್ಜೆಹಾಕಿದ.

ಎಷ್ಟೋ ಖೈದಿಗಳು ತಮ್ಮ ತಮ್ಮ ಅವಧಿಯ ಕಠಿಣಶಿಕ್ಷೆ ಪೂರೈಸಿ ಹೊರಹೋದವರು ಮತ್ತೆಮತ್ತೆ ಪುನಃಪುನಃ ಜೇಲಿಗೆ ಹಿಂತಿರುಗಿ ಬರುವು

ವನ್ನು ನೋಡಿದರೆ ಜಿಗುಪ್ಸೆ-ತಿರಸ್ಕಾರ-ಸಿಟ್ಟು-ರೋಷ ಎಲ್ಲಾ ಬರುತ್ತದೆ. ಇಂತಹವರು ಮನುಷ್ಯರಾಗಿ ಹುಟ್ಟುವುದಕ್ಕಿಂತ ಮೃಗಗಳಾಗಿ ಹುಟ್ಟಿದ್ದಿದ್ದರೆ ತೊಂದರೆ ಇರುತ್ತಿರಲಿಲ್ಲ. ಮನುಷ್ಯ ಮನುಷ್ಯರಿಗೆ ಮಾಡುವಷ್ಟು ಅನ್ಯಾಯವನ್ನು ಪ್ರಾಣಿಗಳು ಖಂಡಿತ ತನ್ನ ವಂಶೀಯರಿಗೆ ಮಾಡಲಾರವು ಎಂಬುದು ಖಚಿತ.

ಆದರೆ, ಈ ಜನ ಏಕೆ ಹೀಗಿದ್ದಾರೆ ? ಅದೇ ಅರ್ಥವಾಗದ ಆಶ್ಚರ್ಯ-ಎಲ್ಲರೂ ನೋಡುವುದು-ಕೇಳುವುದು-ಓದುವುದು-ಬರೆಯುವುದು ಎಲ್ಲಾ ಕುಸಾಹಿತ್ಯವೇ. ಅದಕ್ಕೆ ಮಂಗಳ ಹಾಡುವುದೆಂದರೆ ಈ ಜಗತ್ತನ್ನು ದಾಟಿದ ನಂತರವೇ.....ಇಂಥಿಂಥಹ ಚಿಂತಾಭಾರದಿಂದಲೇ ಹೆಜ್ಜೆಗಳು ಮುನ್ನಡೆದುವು.

ಎದುರಾದ ಖೈದಿಯೊಬ್ಬನನ್ನು ದುರುಗುಟ್ಟಿ ನೋಡಿ ಕೇಳಿದ ನರೇಶ್ "ಏನಯ್ಯಾ, ಬಿಡುಗಡೆಯಾಗಿ ಮೂರುನಾಲ್ಕು ತಿಂಗಳಾಗಲಿಲ್ಲ. ಆಗಲೇ ಮತ್ತೆ ಬಂದುಬಿಟ್ಟೆ ?"

ಅವನು ಒಂದೆರಡು ಕ್ಷಣ ತಬ್ಬಿಬ್ಬಾದನೇನೋ.... ಮರುಕ್ಷಣದಲ್ಲೇ ತನ್ನನ್ನು ತಾನು ಸಾವರಿಸಿಕೊಂಡು ಉತ್ತರಿಸಿದ, "ಏನು ಮಾಡಲಿ ಸ್ವಾಮಿ ? ಪರಿಸ್ಥಿತಿ ಹಾಗಿತ್ತು. ನೀವು ಬಿಡುಗಡೆಯಾದಾಗ ಹೇಳಿದ ಬುದ್ಧಿಮಾತು ಮನದಲ್ಲಿತ್ತು. ಗೌರವ ಜೀವನ ನಡೆಸುವ ಉದ್ದೇಶವೂ ಇತ್ತು. ಆದರೆ, ದುರ್ವಿಧಿ ಸವಾಲು ಹಾಕುತ್ತಲೇ ಇರುತ್ತದೆ. ನಾನು ಹಿಂತಿರುಗುವುದು ಅನಿವಾರ್ಯವಾಯಿತು. ದುರ್ನಿಮಿತ್ತಗಳಿಗೆ ತಲೆಬಾಗಲೇಬೇಕು.

ಅವನ ಉತ್ತರದಲ್ಲಿ ಬುದ್ಧಿವಂತಿಕೆಯಿತ್ತು : ಸಮಯೋಚಿತ ಪರಿಜ್ಞಾನವಿತ್ತು. ಧೈರ್ಯಸ್ಥೈರ್ಯಗಳೂ ಇದ್ದುವು. ಅವನು ಅಂತಹ ಕೆಟ್ಟವನೇನೂ ಅಲ್ಲ. ಅವನ ಸ್ವಭಾವವನ್ನು ಹೇಗೆ-ಏನೆಂದು ಅರ್ಥೈಸಬೇಕೋ ತಿಳಿಯಲಿಲ್ಲ. ನರೇಶ್ ಭಾವುಕತೆಯಲ್ಲಿ ಮೈಮರೆತ.

ನರೇಶ್ ಭಾಗ ವಿಭಾಗಗಳನ್ನು ಸಂದರ್ಶಿಸಿ ಹಿಂದಿರುಗಿದ. ಹಿಂದುಗಡೆಯ ಅಂಗಣದ ಮೂಲೆಯಲ್ಲಿ ಗಲ್ಲುಗಂಬದಿಂದ ಫಾಸಿಯ ಹಗ್ಗದ ಕುಣಿಕೆ ನೇತಾಡುತಿತ್ತು. ಒಂದು ವಾರದ ಹಿಂದೆ ಒಬ್ಬ ಖೈದಿಗೆ ನೇಣು ಬಿದ್ದಿತ್ತು.

ಇನ್ನು ಇಷ್ಟರೊಳಗಾಗಿಯೋ ಮತ್ತೊಬ್ಬನಿಗೆ ನೇಣು ಬೀಳುವುದು ಖಂಡಿತ. ನಾಳೆಯೋ ನಾಡಿದ್ದೋ ಆರ್ಡರ್ ಬರಬಹುದು.

ಒಂದಲ್ಲ ಒಂದು ಕಠಿಣ ಪರಿಸ್ಥಿತಿ ಬರುವುದರಿಂದ ಮಾನಸಿಕ ಹಿಂಸೆ ತಪ್ಪಿದ್ದಲ್ಲ. ಈ ಜೇಲಿನ ಅನುಬಂಧ ಬೇಡವೇ ಬೇಡ ಎಂಬುದು ಮಾನಸಿಕ ಬಂಡಾಯ ; ಆದರೆ....

* * * *

ಜಗತ್ತು ನಾಲ್ಕು ನಿಟ್ಟೆನಿಂದ ಮುಂದುವರಿಯುತ್ತದೆ. ಆತುರ ಕಾತರಗಳ ಮುನ್ನೋಟಕ್ಕೆ ಆದಿ ಅಂತ್ಯಗಳೇ ಇಲ್ಲ. ಸಾಧನಾವೈಖರಿಯಲ್ಲಿಯೂ ಪರಸ್ಪರ ಗಂಭೀರ ಪೈಪೋಟಿ. ಅಂದಮೇಲೆ ನತದೃಷ್ಟ ಜೈಲುವಾಸಿಗಳ ಬಗ್ಗೆ ಏನೆನ್ನಬೇಕೋ.....

ಈಚೆಗೆ ಜೇಲಿನಲ್ಲಿ ಕೆಲವು ಸುಧಾರಣೆಗಳಾಗಿದ್ದುವು.

ದಿನವೂ ಸಂಜೆ ಆರುಗಂಟೆಯಿಂದ ಏಳುಗಂಟೆಯವರೆಗೆ ಒಳ ಅಂಗಣದಲ್ಲಿ ಉದ್ಬೋಧನ ಕಾರ್ಯಕ್ರಮ ಇರುತ್ತದೆ. ಯಾರೊಬ್ಬ ದೇಶಭಕ್ತ ಅಥವಾ ವೇದಾಂತಿ ಅಥವಾ ಧೀಮಂತ ಅಥವಾ ಹರಿದಾಸ ಅಥವಾ ಸಂಗೀತ ಕೋವಿದ ಇಂಥಿಂಥಹವರಿಂದ ಖೈದಿಗಳ ಮಾನಸಿಕ ಬೌದ್ಧಿಕ ಬೆಳವಣಿಗೆಗೆಂದೇ ಉಪನ್ಯಾಸ, ಸಂಗೀತ, ಭಜನೆ, ಹರಿಕಥೆ ಮುಂತಾದ ಕಾರ್ಯಕ್ರಮಗಳು ನಡೆಯುತ್ತವೆ. ಆಗ, ಆ ಸಂದರ್ಭದಲ್ಲಿ ಜೈಲರ್ ಅಲ್ಲಿ ಉಪಸ್ಥಿತನಿರುವುದು ವಾಡಿಕೆ. ಖೈದಿಗಳ ಮುಖದ ಮೇಲೆ ಉಂಟಾಗುವ ಹಾವಭಾವಗಳ ಮುದ್ರೆಯನ್ನು ಕಂಡುಕೊಳ್ಳುವುದು ಸಾಧ್ಯ; ಮತ್ತು ಅವರ ಮಾನಸಿಕ ಪರಿಣಾಮವನ್ನು ನಿರೀಕ್ಷಿಸಲೂಬಹುದು. ಹಲಕೆಲ ಮಂದಿ ಗೌರವಯುತ ಜೀವನಕ್ಕೆ ಕಾಲಿರಿಸಿರುವುದೂ ಗೊತ್ತು. ಆದರೂ, ಈ ಸ್ಥಾನ ಬೇಡವೇ ಬೇಡ ಎಂದು ಚೀರುತ್ತದೆ ಎದೆಯ ಹಕ್ಕಿ.

ಅಂದು ಖೈದಿಯೊಬ್ಬನ ಬಿಡುಗಡೆಗೆ ಅವನ ಅಂಕಿತ ಮುದ್ರೆಯ ಸಹಿತ ಬೀಳುವುದಿತ್ತು. ಪೋಲೀಸ್ ಪೇದೆಯೊಬ್ಬ ಅವನನ್ನು ಆಫೀಸಿಗೆ ಕರೆತಂದ. ಜೇಲಿನ ಸಮವಸ್ತ್ರ ಕಳಚಿ ಬೇರೆ ಉಡಿಗೆ ತೊಟ್ಟಿದ್ದ. ಜೇಲಿನಿಂದ ಹೊರಹೋಗುವ ಉತ್ಸಾಹ ಆತನಲ್ಲಿ ಲವಲೇಶವೂ ಇರಲಿಲ್ಲ. ಲೋಕಾಭಿರಾಮವಾಗಿ ಆತ ಒಳಬಂದ.

"ಏನಯ್ಯಾ, ಇಲ್ಲಿಂದ ಹೋದನಂತರ ಯಾವ ರೀತಿಯ ಜೀವನ ನಡೆಸುವ ಯೋಚನೆಯಲ್ಲಿದ್ದಿ ?"

"ಜಮೀನಿದೆ ಸ್ವಾಮೀ ! ಜಮೀನು ನೋಡಿಕೊಳ್ಳುವೆ."

"ಮನೆಯಲ್ಲಿ ಯಾರಿದ್ದಾರೆ ?"

"ಯಾರೂ ಇಲ್ಲ. ಮೂವರು ಮಕ್ಕಳಿದ್ದರು. ಎಲ್ಲೆಲ್ಲೋ ದಿಕ್ಕಾಪಾಲಾಗಿದ್ದಾರೆಂದು ಸುದ್ದಿ. ಹೋಗಿ ಹುಡುಕಿಕೊಳ್ಳಬೇಕು,"

ಅವನು ಮಡದಿಯನ್ನು ಕೊಂದು ಜೇಲು ಕಂಡವ. ಇನ್ನು ಯಾವೊಬ್ಬ ಹೆಣ್ಣಿನ ಬೆನ್ನು ಹತ್ತಿ ಅವಳ ಜೀವನಕ್ಕೆ ಕುತ್ತಾಗುವುದು ಸತ್ಯ ಎನಿಸಿತು ಮನಸ್ಸಿಗೆ; ಜೇಲರ್ ಮರುಮಾತಿಲ್ಲದೆ ಬಿಡುಗಡೆ ಪತ್ರಕ್ಕೆ ಸಹಿ ಹಾಕಿದ.

* * * *

"ಹಂಸಾ....ಹಂಸವೇಣಿ!"

"..............."

"ಹಂಸಾ ! ಹಂಸಾ!"

"ಊ....ಊ....!"

"ಏನಮ್ಮಾ.....?"

"ಊ.....!"

"ಏನಾಗುತ್ತಿದೆ ಹಂಸಾ ?"

"ಊ....ಹೊಟ್ಟೆನೋವು...."

"ನೀರು ಕುಡಿಯಮ್ಮ..........ಬೆಳಗಾಗಲಿ, ಡಾಕ್ಟರ ಬಳಿಗೆ ಹೋಗೋಣ."

"ಈಗೇನೂ....ಬೇಡ....."

ಹಂಸವೇಣಿ ಮುಖ ಹಿಂಡುತ್ತ ಹೊರಳಿ ಮಲಗಿದಳು. ರಾತ್ರಿಯೆಲ್ಲಾ ಹೊರಳಿ ಹೊರಳಿ ಮಲಗಿದ್ದಾಳೆ. ರಾತ್ರಿ ಬಹುಹೊತ್ತಿನವರೆಗೂ 'ಹೋಂ ವರ್ಕ್' ಮಾಡಿ, ತನ್ನೆಲ್ಲಾ ದಿನಚರಿಯನ್ನು ಕ್ರಮವತ್ತಾಗಿ ಮುಗಿಸಿ ಹಾಸಿಗೆ ಸೇರಿದವಳು ಹಂಸ. ಎಲ್ಲೋ ಸ್ವಲ್ಪಹೊತ್ತು ನಿದ್ದೆ ಮಾಡಿರಬಹುದು. ಹಂಸಾ ಒಂಭತ್ತು ವರ್ಷದ ಮುಗ್ಧ ಬಾಲಕಿ. ಮಗಳು ನರಳು

ವುದನ್ನು ನೋಡಿ "ಏಕೆ ಹೀಗಾಯ್ತು? ಯಾವ ಅಪಥ್ಯವೂ ಆಗಿಲ್ಲ ವಲ್ಲಾ?" ಎಂದಳು ಮಡದಿ. ಅವಳು ಹೊರಳಲು ಆರಂಭಿಸಿದಾಗ ಕನಸು ಕಾಣುತ್ತಿರಬಹುದು ಎಂದುಕೊಂಡಿದ್ದ ಮಡದಿಗೆ ಈಗ ಹಾಗೆನಿಸುತ್ತಿಲ್ಲ. ಆತಂಕದಿಂದ ನುಡಿದಳು "ಅರೆನಿದ್ದೆಯ ಮಂಪರ ಬೇರೆ. ಈಗ ಏನು ಮಾಡೋಣ?"

"ಬೆಳಗಾದನಂತರ ಆಸ್ಪತ್ರೆಗೆ ಕರೆದೊಯ್ಯಬಹುದು."

ಮಧ್ಯರಾತ್ರಿ.... ಒಂದು ಗಂಟೆ.

"ಹಂಸಾ.....ಹಂಸಾ!"

"..........."

"ಸುಮ್ಮನೆ ಏಕೆ ಎಬ್ಬಿಸುತ್ತಿ? ಮಲಗಲಿ, ಸ್ವಲ್ಪಹೊತ್ತಿನಲ್ಲಿ ಸರಿ ಹೋದಾಳು" ಎಂದ ನರೇಶ್.

ಎದ್ದು ನೀರು ಕುಡಿದ ನರೇಶ. ಮಾಲಿನಿ ಮಗಳ ಮೈಮೇಲೆ ಹೊದ್ದಿಕೆ ಎಳೆದು ಸರಿಪಡಿಸಿದಳು. ರಾತ್ರಿಯ ಎಳೆಬೆಳಕಿನ ಮಿಣುಕು ದೀಪ ಉರಿ ಯುತಿತ್ತು ಕ್ಷೀಣರಶ್ಮಿಯನ್ನು ಬೀರಿ. ಸ್ವಲ್ಪ ಹೊತ್ತಿನಲ್ಲಿ ಮೂವರಿಗೂ ಸವಿನಿದ್ದೆ.

* * * *

ಇಂದ್ರ ಮುಹೂರ್ತದ ಸವಿಗಾಳಿಯ ಸುಯ್ ಸುಯ್ ಸದ್ದು.

ಬೆಚ್ಚಗೆ ಹೊದ್ದು ಮಲಗುವಂತಹ ಶೀತಶೀತಲ ವಾತಾವರಣ.

ಟ್ರಿಣ್. ಟ್ರಿಣ್. ಟ್ರಿಣ್. ಟ್ರಿಣ್.

ನರೇಶ್ ಎದ್ದು ಟೆಲಿಫೋನ್ ಕರೆಗೆ ಓಗೊಟ್ಟ

"Yes!"

"ಸಾರ್! ಮೂರು ಗಂಟೆ."

ಟೆಲಿಫೋನಿನ ಸಂಪರ್ಕ ತುಂಡುಗಡಿಯುತ್ತಲೂ ಮಡದಿ ಕೇಳಿದಳು "ಯಾರು ಮಾತಾಡಿದ್ದು?"

"ನಾನು ಟೆಲಿಫೋನ್ ಎಕ್ಸ್‌ಚೇಂಜಿಗೆ ಮೂರು ಗಂಟೆಗೆ ಎಬ್ಬಿಸಲು ಹೇಳಿದ್ದೆ."

"ಏಕೆ....?"

"ಅದೇ ಆ ಮೃಡೇಶ್ವರ ಕೋರಾನನ ಜನ್ಮ ಇಂದು ! ಈ ಹಾಳು ಜನ
ಕೆ ಹೀಗೆ ಸಾಯ್ತಾರೋ! ಇವರ ಪಾಪವೆಲ್ಲ ನಮ್ಮ ತಲೆಯ ಮೇಲೆ!"

ನರೇಶ್ ಪ್ರಾತಃರ್ವಿಧಿಯನ್ನು ಪೂರೈಸಿ ಕೋಟು ತೊಟ್ಟು ಟಾರ್ಚಿನ
ಹಿತ ಹೊರಬಿದ್ದ. ಸದ್ದಿಲ್ಲದ ಶಾಂತವಲಯದಲ್ಲಿ ಆಗಾಗ ನಾಯಿಯ
ಮೊಗಳು, ಗೂಬೆಯ ಮೊಳಗು ಕೇಳಿಬಂದರೂ ಅದು ತೀರ ವಿರಳ.

ನರೇಶ್ ಟಾರ್ಚ್ ಬೆಳಕಿನ ಸಹಾಯದಿಂದ ಮನೆಯ ಮೆಟ್ಟಲಿಳಿದ.

ನೀಲಗಗನದ ತುಂಬೆಲ್ಲಾ ಮಿನುಗುವ ತಾರಾಗಣಗಳ ಕೋಟಿ.
ಚಂದ್ರಮನಿಲ್ಲದ ಕತ್ತಲ ಸಾಮ್ರಾಜ್ಯ. ತಂಗಾಳಿಯಾಟದಿಂದ ಎಲೆಎಲೆಗಳ
ಮರ್ಮರ ಲೀಲೆ.

*   *   *   *

ಭರ್ರನೆ ಕಾರೊಂದು ಬಂದು ತಲೆಬಾಗಿಲಲ್ಲಿ ನಿಂತಿತು.

ಅದರ ಜಗಜಗಿಸುವ ದೀಪಗಳನ್ನು ಆರಿಸಲಿಲ್ಲ ಡ್ರೈವರ್.

ಮರುಗಳಿಗೆಯಲ್ಲಿಯೆ ಮತ್ತೊಂದು ಕಾರು ಹಿಂದೆಯೇ ಆಗಮಿಸಿತು.
ಮೊದಲ ಕಾರಿನಲ್ಲಿ ಬಂದಿಳಿದ ಮ್ಯಾಜಿಸ್ಟ್ರೇಟರನ್ನು ಸ್ವಾಗತಿಸಿದ ಬಳಿಕ
ರೇಶ್ ಎರಡನೆಯ ಕಾರಿನತ್ತ ಹೆಜ್ಜೆಹಾಕಿ ಡಾ|| ಸ್ವಾಮಿಯನ್ನು ಸ್ವಾಗತಿ
ದ. ಮೂವರೂ ಜೇಲಿನ ಒಳಾಂತರಕ್ಕೆ ನಡೆದರು. ಸಾಲುಕಂಬಿಗಳ ಕೊಠ
ಗಳಲ್ಲಿ ಕೆಲವರು ನಿದ್ರಿಸಿದ್ದರೆ ಕೆಲವರು ಕುಳಿತಿದ್ದಾರೆ. ಮ್ಲಾನಮುಖ;
ಬಡ್ಡುಗಟ್ಟಿದ ಶರೀರ. ಸುಖ-ದುಃಖ-ಕೋಪ-ತಾಪ-ರೋಗ-ರುಜಿನಗಳೇ
ಮೈವೆತ್ತು ಬಂದಂತಹ ಜನಸಂಗರ. ಅತ್ಯಂತ ಕರುಣಾಯಿತ ಚಿತ್ತಾರ.

ಎಲ್ಲ ಕಡೆಯೂ ಬೆಳಗುತಿದ್ದ ವಿದ್ಯುದ್ದೀಪಗಳ ಮಧ್ಯೆ ಜೈಲರ್
ಡಿದ ಟಾರ್ಚಿನ ಭರ್ಜರಿ ಬೆಳಕು ಹಾದಿ ತೋರಿತು. ಮೂವರೂ ಆ ವಿಭಾ
ದ ಕೊನೆಯಲ್ಲಿ ಸಾಲಾಗಿದ್ದ ಕೊಠಡಿಗಳಿಗೆ ಬಂದಾಗ ಐದನೆಯ ಕೊಠ
ಯ ಖೈದಿ ಎರಡೂ ಕೈಗಳಿಂದ ಮೊಣಕಾಲುಗಳನ್ನು ಕಟ್ಟಿ ಕುಳಿತಿದ್ದ.
ಟ್ಟಾಮುಟ್ಟಾ ಗಂಡಾಳು. ತಲೆ-ಮುಖಗಳಲ್ಲಿ ಉದ್ದುದ್ದವಾಗಿ ಬೆಳೆದ
ಡ್ಡ ಮೀಸೆ ಕೂದಲುಗಳ ಜೆಳೆ. ಅವನ ಮಿಂಚು ನೋಟ ಇತ್ತಲೇ
ಟ್ಟೈಸಿತು.

"ಇವರೇ ಸರ್!"

"ನೀವೇ ಏನಪ್ಪಾ ಮೃಡೇಶ್ವರ ಕೋರಾನ ?"

"ಹೌದು...."

ಅವನು ಆರೇಳು ಸಲ ಕಳ್ಳತನದಿಂದ ಜೇಲು ಕಂಡವನು. ಅನಂತರ ಕೊಲೆ-ಡಕಾಯಿತಿಗಿಳಿದ ಭಾರಿ ಕಳ್ಳ.

"ನೀನು ಸ್ನಾನ ಮಾಡುತ್ತೀಯಾ ?"

"ಉಹೂ....ಬೇಕಿಲ್ಲ."

"ನಿನ್ನ ಕೊನೆಯಾಸೆ ಏನು ?"

ಅವನು ತಲೆಯಾಡಿಸಿ "ಏನೂ ಇಲ್ಲ" ಎಂದ.

"ಸ್ವಜನರನ್ನು ನೋಡಿದೆಯಾ ?"

"ನಿನ್ನೆ ನೋಡಿದ್ದಾಯಿತು."

"ನಿನ್ನ ಕೊನೆಯಾಸೆ ಏನು ಹೇಳಿಬಿಡು. ?"

ಆಗಲೂ ಅವನು ತಲೆಯಾಡಿಸಿ 'ಏನೂ ಇಲ್ಲ' ಎಂಬುದನ್ನು ಸೂಚಿಸಿದ.

ವ್ಯಕ್ತಿ ಕಲ್ಲಿಗಿಂತಲೂ ಕಠಿಣ.

* * * *

ಕೆಲವು ಕ್ಷಣ ಎಲ್ಲರ ದೃಷ್ಟಿ ಪರಸ್ಪರ ಮುಖ ನೋಡುವುದರಲ್ಲಿ ಕಳೆಯಿತೇನೋ....

ಮ್ಯಾಜಿಸ್ಟ್ರೇಟ್ ನಾಲ್ಕು ಪಂಕ್ತಿಗಳ ಕೋರ್ಟ್ ಆರ್ಡರನ್ನು ಓದಿ ಹೇಳಿದ.

"ಅದೆಲ್ಲಾ ಬೇಕಿಲ್ಲ ಸ್ವಾಮಿ!"

"ಹೇಳಬೇಕಾದುದು ನಮ್ಮ ಧರ್ಮ."

"ನನಗೆ ಧರ್ಮ-ಕರ್ಮ ಯಾವುದೂ ಬೇಕಿಲ್ಲ."

"ಮನುಷ್ಯರಾಗಿ ಹುಟ್ಟಿದಮೇಲೆ ಎಲ್ಲಾ ಬೇಕಪ್ಪ! ಬೇಡ ಅನ್ನಬಾರದು."

"ಬದುಕಿ ಬಾಳುವವರಿಗೆ ಬೇಕು. ನೀವು ಇಟ್ಟುಕೊಳ್ಳಿ. ನನಗದರ ಅವಶ್ಯಕತೆಯಿಲ್ಲ."

"ನೀನು ವಿದ್ಯಾಭ್ಯಾಸ ಮಾಡಿದವನೋ ?"

"ಹೌದು."

"ಎಲ್ಲಿಯತನಕ ಓದಿದ್ದಿ ?"

"P.U.C. ಆಗಿದೆ."

ಆ ಮಾತಿಗೆ ಏನೋ ಹೇಳಬಯಸಿದ ಮ್ಯಾಜಿಸ್ಟ್ರೇಟ್ ಅಲ್ಲಿಗೆ ಸುಮ್ಮ ನಾದ. ಅವರಿಬ್ಬರ ಸಂವಾದವನ್ನು ಕೇಳುತಿದ್ದ ಡಾಕ್ಟರು ಆತನ ಮನಃ ಸ್ಥೈರ್ಯವನ್ನು ಕಂಡು ಆಶ್ಚರ್ಯಚಕಿತನಾದ. ಆಸ್ಪತ್ರೆಯಲ್ಲಿ ಸಣ್ಣ ಸಣ್ಣ ಆಪರೇಶನ್ನಿಗೂ ಸ್ಥೈರ್ಯ ಕಳೆದುಕೊಂಡವರನ್ನು ದಿನವೂ ನೋಡು ತಿದ್ದ ಚಿತ್ರವೆಲ್ಲಿ ? ಇವನೆಲ್ಲಿ ?

ಜೈಲರ್ ಡಾಕ್ಟರ ಮುಖಭಾವವನ್ನು ನೋಡಿ ನುಡಿದ "ಇಲ್ಲಿಯೂ ಅಷ್ಟೆ, ಖೈದಿಗಳು ಸ್ಥೈರ್ಯ ಕಳೆದುಕೊಳ್ಳುತ್ತಾರೆ. ಹೀಗಿರುವವರು ವಿರಳ."

ಮ್ಯಾಜಿಸ್ಟ್ರೇಟ್ ನೋಟವನ್ನು ಗಡಿಯಾರದ ಕಡೆ ಹೊರಳಿಸಿದ. ಹೊತ್ತು ಸಮಿಾಪಿಸುತ್ತಿದೆ. ಇನ್ನಿರುವುದು ಇಪ್ಪತ್ತೆರಡು ನಿಮಿಷಗಳು ಮಾತ್ರ. ಜವಾನ ಕೊಠಡಿಯ ಬೀಗ ತೆಗೆದ. ಮೃಡೇಶ್ವರ್ ಕುಳಿತ ಭಂಗಿಯಲ್ಲೇ ಎಲ್ಲರನ್ನೂ ನೋಡಿದ. ವಿದ್ಯುತ್ತಿನ ಬೆಳಕಿನಲ್ಲಿ ಎಲ್ಲರೂ ಮಿಂದು ನಿಂತ ಸ್ಪಷ್ಟ ಚಿತ್ರ. ಜವಾನ ಅವನ ತೋಳನ್ನು ಹಿಡಿದು ಹೊರ ನಡೆಸಿದ. ಸುತ್ತಮುತ್ತ ಜವಾನರ ಹಿಂಡು. ದಂಡುಗಟ್ಟಿದಂತಿತ್ತು.

"ಹ್ಯಾಂಗ್ ಮ್ಯಾನ್ ಬಂದಿದ್ದಾನೆಯೇ ?"

"ಎಸ್ ಸರ್ !"

"ಇನ್ನೂ ಇಪ್ಪತ್ತೆರಡು ನಿಮಿಷಗಳಿವೆ."

ಹಿಂದುಗಡೆಯಿಂದ 'ಸೆಲ್' ಕದ ಮುಚ್ಚಿತು. ಸಾಲಾಗಿನ ಕಂಬಿಯ ಸೆಲ್ಲಿನಿಂದ ಜೋಡಿಜೋಡಿ ಕಣ್ಣುಗಳು ಇತ್ತಲೇ ನೋಡುತ್ತಿವೆ.

"ಇನ್ನೇಕೆ ತಡ ಸ್ವಾಮಿಾ ?" ಮೃಡೇಶ್ವರ ಕೊರಾನ ಅಂದ. ದನಿ ಯಲ್ಲಿ ಕಂಪನವಾಗಲೀ ಹಿಂಜರಿಕೆಯಾಗಲೀ ಇಲ್ಲವೇ ಇಲ್ಲ. ದೃಢವಾದ ನಿಲುವು. ದೃಢವಾದ ಕಂಠ.

ಎಷ್ಟೋ ಮಂದಿ ಅತ್ತೂ ಕೂಗಿ ಒದ್ದಾಡಿದ್ದುಂಟು. ಕುಸಿದು ಬಿದ್ದುದುಂಟು. ಗಡಗಡ ನಡುಗಿದ್ದುಂಟು.

ಆದರೆ.....!

ಮೃಡೇಶ್ವರ್ ಅಸಹನೆಯಿಂದ ಗರ್ಜಿಸಿದ "ಇನ್ನು ತಡೆಯಲಾರೆ. ಬೇಗ ಮಾಡಿ ಬಿಡಿ."

"ಇಲ್ಲ.....ಇನ್ನೂ ಇತರ ಕೆಲಸಗಳು ಇವೆ. ನಿನಗೆ ತಿಳಿಸುವುದನ್ನೆಲ್ಲಾ ಪೂರಾ ತಿಳಿಸಿಲ್ಲ."

"ಏನೂ ಬೇಕಿಲ್ಲ."

ಮ್ಯಾಜಿಸ್ಟ್ರೇಟ್ ವಾರೆಂಟಿನ ಮುಂದಿನ ಭಾಗವನ್ನು ಓದಿದ "ನೀನು ಮೃಡೇಶ್ವರ್ ಕೊರಾನಾ. ನಿನಗೆ 'ಇಂಥ' ನ್ಯಾಯಾಲಯವು ದಂಡ ವಿಧಾನದ 'ಇಂಥ' ಸಾಲಿನ ಪ್ರಕಾರ ಅಪರಾಧಿಯೆಂದು ತಿಳಿದು ಮರಣ ದಂಡನೆಯ ಆಜ್ಞೆಯನ್ನು ಕೊಟ್ಟಿತು. ಆ ಆಜ್ಞೆಗೆ ಮೇಲಿನ ನ್ಯಾಯಾಲಯ ಸಮರ್ಥನೆಯಿತ್ತಿತು. ನೀನು ಆ ದಂಡನೆಯ ವಿರುದ್ಧ ಅಪೀಲು ಮಾಡಿದ್ದು ಸರಿಯಷ್ಟೆ? ಅದು ಡಿಸ್‌ಮಿಸ್ ಆದುದರಿಂದ...."

"ಸಾಕು ರೀ! ಸಾಕು! ನಿಲ್ಲಿಸಿ! ಇಂಥ ಉಪಚಾರಗಳೊಂದೂ ಬೇಕಿಲ್ಲ. ನಾನು ಕೇಳಿ ಆಗಬೇಕಾದುದೇನು? ಈಗಾಗಲೇ ಕೇಳಿಕೇಳಿ ಸಾಕಾಗಿದೆ. ಇನ್ನು ಹೆಚ್ಚು ತೊಂದರೆ ಕೊಡಬೇಡಿ. ನಾನಿನ್ನು ತಡೆಯಲಾರೆ....ತಡೆಯಲಾರೆ ಬೇಗ ಮುಗಿಸಿ....!"

ಯಾರೋ ರಾಮನಾಮ ಹಾಡಿದರು.

ಜೈ ಜೈ ಸೀತಾರಾಮ್. ಜೈ ಜೈ ಸೀತಾರಾಂ.

"ಛೀ! ಛೀ! ನನಗೆ ಯಾವ ಧರ್ಮಕಳೆಯೂ ಬೇಕಿಲ್ಲ! ಕೇಳಲಾರೆ!" ಮೃಡೇಶ್ವರ್ ಅಸಹನೆಯಿಂದ ಮತ್ತೆ ಕೂಗಿದ,

"ಸ್ವರ್ಗದ ಹಾದಿ ಹಿಡಿದ ಮೇಲೆ ರಾಮ ಮಂದಿರ ಇದ್ದದ್ದೇ. ಇನ್ನು ರಾಮ ನಾಮವೇಕೆ? ಇದೊಂದು ವಿಪರ್ಯಾಸ ಅಥವಾ ವಿಪರೀತ!"

ಹ್ಯಾಂಗ್‌ಮ್ಯಾನ್ ಮುಂದೆ ಬಂದು ಮೃಡೇಶ್ವರನ ಕೈಗಳನ್ನು ಹಿಂದಕ್ಕೆ ತೆಗೆದುಕೊಂಡು ಹಗ್ಗದಿಂದ ಕಟ್ಟಿದ. ಮೃಡೇಶ್ವರ್ ಸ್ವಲ್ಪವೂ ವಿಚಲಿತನಾಗದೆ ಕೈಗಳನ್ನು ದೀನಾತಿದೀನತೆಯಿಂದ ಒಪ್ಪಿಸಿಕೊಂಡ.

"ಇನ್ನೂ ಹದಿನಾರು ನಿಮಿಷವಿದೆ."

"ಪರವಾಯಿಲ್ಲ.....!" ಮೃಡೇಶ್ವರ್ ಗರ್ಜಿಸಿದ.

ಹ್ಯಾಂಗ್‌ಮನ್ ಕಪ್ಪು ಬಟ್ಟೆಯಿಂದ ಮುಖವನ್ನು ಮುಚ್ಚಿದ ನಂತರ ಅವನನ್ನು ನೇಣುಗಂಬಕ್ಕೆ ನಡೆಸಿದ. ಮೌನ....ಎಳ್ಳು ಬೀಳಿಸಿದರೂ ಕೇಳಿಸುವಂತಹ ಶಾಂತಮೌನ. ಹ್ಯಾಂಗ್‌ಮ್ಯಾನ್ ಕೊರಳಿಗೆ ಉರುಳು ತೊಡಿಸಿ ಮ್ಯಾಜಿಸ್ಟ್ರೇಟನ ಮುಖ ನೋಡಿದೊಡನೆಯೇ ಅವನು ಕೈಯೆತ್ತಿ ಸಂಜ್ಞೆ ಮಾಡಿದ. ಹ್ಯಾಂಗ್‌ಮ್ಯಾನ್ ಆ ಕ್ಷಣವೇ ಹಗ್ಗ ಎಳೆದು ಕಾರ್ಯ ಮುಗಿಸಿದ. ನರೇಶ್ ಗಡಿಯಾರದ ಕಡೆ ನೋಡಿದ. ಇನ್ನೂ ಹನ್ನೆರಡು ನಿಮಿಷಗಳು ಉಳಿದಿದ್ದುವು.

* * * *

ಹಂಸಾ..... ಹಂಸವೇಣಿ ಆಸ್ಪತ್ರೆಯಲ್ಲಿ ಆಪರೇಶನ್ ಥಿಯೇಟರಿನ ಮೇಜಿನ ಮೇಲೆ ಮಲಗಿದ್ದಾಳೆ. ತುರ್ತು ಆಪರೇಶನ್ ಸಕ್ಸಸ್‌ಫುಲ್ ಆಯಿತು ಎಂಬ ನಿರೂಪ ಹೊರಬಿತ್ತು.

"ಇನ್ನು ಹತ್ತು ನಿಮಿಷ ತಡವಾಗಿದ್ದಿದ್ದರೆ ಉಳಿಯುತ್ತಿರಲಿಲ್ಲ" ಎಂದರು ಡಾಕ್ಟರು.

"ಹತ್ತು ನಿಮಿಷ !" ಯೋಚಿಸಿದ ನರೇಶ್. ಹತ್ತು ನಿಮಿಷ ಮುಂಚೆ ಮೃಡೇಶ್ವರ್ ಹೋದುದರಿಂದ ಮಗಳ ಪ್ರಾಣ ಉಳಿಯಿತು. ಎಲ್ಲಿಂದ ಎಲ್ಲಿಗೆ ? ಹಾ.....!

(ಆಧಾರ)



# ನಾಗಿನಿ

ಜಾಡ್ಯಂದಿಯೊ ಹರತಿ ಪಿಂಚತಿ ಸತ್ಯಂ
ಮನೋನ್ನತಿಂ ದಿಶತಿ ಪಾಪಮಪಾ ಕರೋತಿ ||

ಜೆ. ಸಿ. ಆಸ್ಪತ್ರೆಗೆ ಅತೀವ ಪ್ರಸವವೇದನೆಯಿಂದ ನರಳುತ್ತ ಬಂದ ರುಕ್ಮಿಣಿಗೆ ತಾಳಲಾಗದ ನೋವು....ನೋವು....ನೋವು....

ಇಡೀ ದಿನವೆಲ್ಲಾ ನರಳಾಟದಲ್ಲಿಯೇ ಕಳೆಯಿತು.

"ಸದಾ ಮಲಗಿರಬೇಡ. ಸ್ವಲ್ಪ ತಿರುಗಾಡು. ನಾಳೆಯೋ ನಾಡಿದ್ದೋ ಹೆರಿಗೆ ಆಗಬೇಕಾದರೆ. ಆದ್ದರಿಂದ ಸ್ವಲ್ಪ ಓಡಾಡುವುದು ಒಳ್ಳೆಯದು."

ಡಾಕ್ಟರ ಮಾತಿಗೆ 'ಹ್ಞೂ' ಎಂದರೂ ರುಕ್ಮಿಣಿಗೆ ತಿರುಗಾಡುವ ಮನಸ್ಸೇ ಇಲ್ಲ. ಶಯ್ಯಾಪ್ರಾಂತದಲ್ಲಿ ಕುಳಿತು ಬಾಗಿಲ ಕಡೆ ನೋಡಿದಳು. ಕಾರಿಡಾರಿನಲ್ಲಿ ಆಸ್ಪತ್ರೆಯ ಸಿಬ್ಬಂದಿಯಲ್ಲದೆ ಹೋಗಿ-ಬರುವ ಜನ ಓಡಾಡುತ್ತಲೇ ಇರುತ್ತಾರೆ. ಅವರ ಮುಂದೆಲ್ಲಾ ನರಳು ಮುಖಮಾಡಿಕೊಂಡು ಓಡಾಡುವುದು ನಾಚಿಗೆಗೇಡು...ಎಂದುಕೊಂಡು ಸುಮ್ಮನಾದಳು.

ಕಿಟಕಿಯ ಪರದೆಯಲ್ಲಿ ಗುಲಾಬಿ ಹೂಗಳ ಚಿತ್ರ; ಹಸುರು ಎಲೆಗಳು ಮೊಗ್ಗುಗಳಿಂದ ಕೂಡಿದ ಹೂಗೊಂಚಲುಗಳ ಶೋಭೆ ನಯನ ಮನೋಹರ. ನೈಜ ಹೂವುಗಳನ್ನೂ ಮೀರಿಸುವಂತಹ ಸೌಂದರ್ಯವನ್ನು ನೋಡುತಿದ್ದರೆ ಮನಸ್ಸಿಗೆ ಬಲೂ ಅಪ್ಯಾಯಮಾನ. ನೋವಿನಿಂದ ನರಳುವ ಜೀವಕ್ಕೆ ಸ್ವಾಂತನ ನೀಡುವಷ್ಟು ಸುಸುಂದರ.

ಮೊದಲ ಮಗು ಗಂಡು. ಇದು ಹೆಣ್ಣಾದರೆ ಸಾಕು ....ಹೆಣ್ಣು.... ಹೆಣ್ಣು ಮಗುವಿಗಿರುವಷ್ಟು ಶೋಭೆ ಗಂಡು ಮಗುವಿಗಿರುವುದಿಲ್ಲ. ಹೆಣ್ಣು

ಪ್ರೀತಿಯ ಆಗರ. ದೇವರ ದಯದಿಂದ ಹೆಣ್ಣು ಮಗು ಬಂದರೆ ಪುಣ್ಯ ಎಂದು ಮನದಲ್ಲೇ ಹೇಳಿಕೊಂಡಳು. ಹೆಣ್ಣು ಮಗುವನ್ನು ನೆನೆದಾಗಲೇ ಹೃದಯ ಕುಂಡದಲ್ಲಿ ಆನಂದದ ಹೆದ್ದೆರೆಗಳು ತುಂಬಿ ತುಯ್ಯಲಾಡಿದುವು. ಹೆಣ್ಣುಮಗುವಿನ ಚಿತ್ರ ಸುತ್ತಮುತ್ತ ಸುಳಿಸುಳಿದಳಿಯಿತು. ಮಾಸಿಕವೊಂದನ್ನು ತಿರಿವಿಹಾಕಿದಳು ಜಾಹೀರಾತಿನಲ್ಲಿ ಪ್ರಕಟಿತ ಪುಟ್ಟಪುಟ್ಟ ಹೆಣ್ಣು ಮಕ್ಕಳ ಚಿತ್ರವನ್ನು ನೋಡುತಿದ್ದರೆ ಪರಮಾನಂದ ಮನಃಪ್ರಾಣಗಳಿಗೆ. ತಾಯ್ತನದ ಹುಮ್ಮಿನಿಂದ ಒಡಲು ನಲಿಯುತ್ತದೆ.

ಇನ್ನೂ ಒಂದೆರಡು ದಿನಗಳು ನೋವುಣ್ಣುವುದು ಶಿವನಿಗೇ ಸಂವೇದ್ಯ. ಇಂದೇ ಪ್ರಸವವಾಗಿದ್ದರೆ ಹಾಯಾಗಿರಬಹುದಿತ್ತು..........ಎಂದುಕೊಂಡು ವಿಶ್ರಾಂತಿಗಾಗಿ ಹಾಸಿಗೆಯ ಮೇಲೆ ಅಡ್ಡಾದಳು. ಔಷಧಿ ತಂದ ನರ್ಸ್ ನೀಲಾ "ಈ ಸಲಿ, ನೀವು ಪಡೆವುದು ಹೆಣ್ಣುಮಗುವನ್ನೇ...." ಎಂದಾಗ ನೋವಿನಲ್ಲೂ ಎಳೆಮುಗುಳು ಅರಳಿತು ತುಟಿಗಳಲ್ಲಿ.

* * * *

ಲೇಬರ್ ವಾರ್ಡಿನಲ್ಲಿ ಗಟ್ಟಿಯಾಗಿ ಉಸಿರಾಡುವುದು ಕಷ್ಟವೇ ಎಂಬಷ್ಟು ಭಯ ಬಗೆಬಗೆಯ ಚಿಕಿತ್ಸಾಶಸ್ತ್ರಗಳ ಕೋಟೆಯಲ್ಲಿ. ಶುಕ್ರವಾರ ಬೆಳಗಿನ ಝಾವ ಹೆಣ್ಣು ಮಗು ಆದರೆ ಮನೆಗೆ ಭಾಗ್ಯಲಕ್ಷ್ಮಿ ಬಂದಂತೆ ಎಂಬ ನಂಬುಗೆ-ರುಕ್ಮಿಣಿ ಗಂಟೆ ನೋಡಿಕೊಂಡಳು. ಐದು ಗಂಟೆ.....ಅನಂತರ ಕೆಲವೇ ಕೆಲವು ನಿಮಿಷಗಳಲ್ಲಿ ಪವಿತ್ರಾತ್ಮವಾದ ಶಿಶುವೊಂದು ಈ ಪಾಪ ಪೂರಿತ ಪ್ರಪಂಚಕ್ಕೆ ಅಳುತ್ತಲೇ ಆಗಮಿಸಿತು. ಎಳೆದನಿಯ ಮುದ್ದು ಅಳು.

"ಎಂಥ ಮಗು ಡಾಕ್ಟರ್ ?"

ತಾಯಿಯ ಆಶಾಭರಿತ ಪ್ರಶ್ನೆಗೆ ಉತ್ತರಿಸಲಾರದೇ ಉತ್ತರಿಸಿದಳು ಡಾಕ್ಟರ್ "ಹೆಣ್ಣು ಮಗು."

ಆ ಮುಹೂರ್ತದಲ್ಲಿ ರುಕ್ಮಿಣಿಗಾದ ಆನಂದ ಅಷ್ಟಿಷ್ಟಲ್ಲ. "ತನ್ನ ಶ್ರಮ ಸಾರ್ಥಕವಾಯಿತು. ಇನ್ನು ಹಾಯಾಗಿ ನಿದ್ದೆ ಮಾಡುವೆ. ಈ ದಿನ ಏಳುವುದೇ ಇಲ್ಲ ಡಾಕ್ಟರ್!" ಎಂದಳು ಪ್ರಸನ್ನಮುಖಿಯಾಗಿ.

"ಆಗಲಿ, ಹಾಯಾಗಿ ಮಲಗಿ ಬಿಡಿ."

ಮಗುವನ್ನು ಇನ್ನೊಂದು ಮೇಜಿಗೆ ಕೊಂಡೊಯ್ದು ಪರೀಕ್ಷಿಸಿದಳು ಡಾ|| ಲೈಲಾ. ಮಗು ಲಕ್ಷಣವಾಗಿದ್ದುದು ದಿಟ. ಕೈಕಾಲುಗಳೆರಡೂ ತಿರುಚಿಕೊಂಡಿವೆ. ಮೂಳೆಯಲ್ಲಿಯೇ ದೋಷ. ಮುಂದೆ ಸರಿಯಾಗಿ ನಡೆಯುವುದು ಕಷ್ಟ. 'ಪಾಪ, ಹೆಣ್ಣುಮಗು ವ್ಯರ್ಥ ಜೀವನ' ಎಂದುಕೊಂಡಳು ಮನದಲ್ಲಿ. ಮಗುವಿಗಾಗಿ ಕಾರುಣ್ಯದ್ರವ್ಯ ಮಂಜಿನಂತೆ ಕರಗಿತು. ಡಾ|| ಲೈಲಾ ಮಗುವಿನ ಕೈಕಾಲುಗಳಿಗೆ ಬ್ಯಾಂಡೇಜು ಸುತ್ತಿ ಮಕ್ಕಳ ತಜ್ಞರಿಗೆ ಕರೆ ನೀಡಿದಳು.

ಬಳಲಿದ್ದ ಅತಿಯಾಗಿ ಬಳಲಿದ್ದ ರುಕ್ಮಿಣಿಗೆ ಅಂದು ಎಣೆಯಿಲ್ಲದ ನಿದ್ದೆ. ಮಗುವಿನ ಸಲ್ಲಕ್ಷಣವಾದ ಮುಖವನ್ನು ನೋಡಿದ್ದಷ್ಟೇ ಸಾಕಾಗಿತ್ತು. ಆನಂದ-ಸಮಾಧಾನಗಳಿಂದ ನಿದ್ದೆ ಹೋದಳು. ಮಧ್ಯಾಹ್ನ ಎಚ್ಚೆತ್ತಾಗಲೂ ದುಪ್ಪಟಿಯಿಂದ ಸುತ್ತಿದ್ದ ಮಗುವಿನ ಅಂಗವಿಕಲತೆಯನ್ನು ಕಂಡುಕೊಳ್ಳಲಿಲ್ಲ ರುಕ್ಮಿಣಿ.

ಮರುದಿನ ನರ್ಸ್ ಮಗುವಿನ ಅಂಗವಿಕಲತೆಯನ್ನು ಹೇಳಲಾರದೇ ಹೇಳಿದಾಗ ಆದ ಆಘಾತ ಅಷ್ಟಿಷ್ಟಲ್ಲ. ಮಗುವಿನ ಸ್ಥಿತಿಯನ್ನು ನೋಡಿ ಕಣ್ಣುಗಳಿಗೆ ಕತ್ತಲೆ ಕವಿಯಿತು. ಹಾಗೇ ಹಿಂದಕ್ಕೆ ಹೊರಳಿ ಹಾಸಿಗೆ ಸೇರಿದಳು. ಅವಳಿಂದ ಮನಸ್ಸನ್ನು ಹತೋಟಿಗೆ ತಂದುಕೊಳ್ಳಲಾಗಲಿಲ್ಲ. ಅಳು....ಅಳು.....ಕೊನೆಗಾಣದ ಅಳು. ಯಾರ ಸಮಾಧಾನವನ್ನೂ ಮನಸ್ಸಿಗೆ ತೆಗೆದುಕೊಳ್ಳದೆ ಮುಸುಗಿಟ್ಟು ಮಲಗಿದಳು. ಮಗುವನ್ನು ಎತ್ತಿಕೊಳ್ಳಲಿಲ್ಲ. ಹಾಲೂಡಿಸಲೂ ಇಲ್ಲ. ದೋಷ ಮಗುವಿನದಲ್ಲ. ಆದರೂ ಕರುಣೆ ತೋರಲಿಲ್ಲ. ಪ್ರೀತಿ-ವಿಶ್ವಾಸಗಳು ಮೈಲಿದೂರ.

*   *   *   *

ಲೋಕದ ಪಾಪ ಪುಣ್ಯಗಳನ್ನು ಅರಿಯದ ಮುದ್ದುಮುದ್ದಾದ ಮುಗ್ಧ ಮಗು ಜಗದ ಬೆಳಕನ್ನು ನಿಟ್ಟಿಸಲಾರದೊ ಎಂಬಂತೆ ನಿದ್ದೆಯಲ್ಲಿಯೇ ಕಳೆಯುತಿತ್ತು ಬಹುತೇಕ ಸಮಯವನ್ನು. ಡಾ|| ಲೈಲಾ ಹೇಳಿದ ಸಮಾಧಾನದ ನುಡಿಗಳು ಬೀಸುಗಾಳಿಯಲ್ಲಿ ತೂರಿಹೋದುವು. ಮರುದಿನ ಬೆಳಗಾಗೆದ್ದರೆ ರುಕ್ಮಿಣಿ ಪತ್ತೆಯೇ ಇಲ್ಲ. ಆಸ್ಪತ್ರೆಯ ಉದ್ದಗಲಕ್ಕೂ ಹುಡುಕಿ ಸೋತುಹೋಯಿತು ಸಿಬ್ಬಂದಿ. ಮಗುವನ್ನೇನು ಮಾಡಬೇಕು? ಅದರ

ಬಗ್ಗೆ ಒಂದು ಚೀಟಿಯೂ ಇಲ್ಲ. ಎಲ್ಲರೂ ಪರಸ್ಪರ ಮುಖಮುಖ ನೋಡಿ ಕೊಂಡರು.

"ಎಷ್ಟು ಚೆನ್ನಾದ ಮಗು ?.....ಹೀಗಾಗಬಾರದಿತ್ತು."

"ಮಗುವನ್ನು ಬಿಟ್ಟು ಹೋದಳಲ್ಲ....? ಅವಳಿನ್ನೆಂತಹ ತಾಯಿ ?"

ಎಲ್ಲರ ಬಾಯಿಯಲ್ಲೂ ಪುನಃಪುನಃ ಅದೇ ಪ್ರಶ್ನೆ—"ಅವಳಿನ್ನೆಂತಹ ತಾಯಿ !"

"ಛಿಃ ! ಛಿಃ ! ಹೃದಯಹೀನೆ !"

"ಪಾಪದ ಮಗು ಹುಟ್ಟಿದಾಗಲೇ ಸತ್ತಿದ್ದರೆ ಚೆನ್ನಾಗಿತ್ತು. ಭಗವಂತ ಇಂತಹ ಮಕ್ಕಳಿಗೆ ತುಂಬಾ ಆಯುಸ್ಸು ಕೊಡುತ್ತಾನೆ."

"ಜನ್ಮಾಂತರಗಳ ಕರ್ಮ.........ಏನಾಗಬೇಕೋ ಅದು ಆಗಿಯೇ ತೀರುತ್ತೆ."

"ಮುಂದೆ ಇದರ ಗತಿಯೇನು ?"

"ದೇವರೇ ಕಾಪಾಡಬೇಕು."

ಹೀಗೆ ಹತ್ತುಹಲವು ಪ್ರಕಾರವಾಗಿ ಮಾತುಕತೆಗಳು ನಡೆದುವು ನಿತ್ಯ-ನಿರಂತರ.

ಮುಗ್ಧ ಮಗು ಅದಾವುದರ ಪರಿವೆಯಿಲ್ಲದೆ ಮುದ್ದುಮುದ್ದಾಗಿ ಮಲಗಿತ್ತು ತೊಟ್ಟಿಲಲ್ಲಿ.

* * * *

ಮಕ್ಕಳ ವಾರ್ಡಿನಲ್ಲಿ ಹದಿನಾರು ತೊಟ್ಟಿಲುಗಳು.

ಎಲ್ಲಾ ತೊಟ್ಟಿಲುಗಳೂ ಮಕ್ಕಳಿಂದ ಭರ್ತಿ. ಒಂದು ಮಗು ಮನೆಗೆ ಮರಳಿದರೆ ಇನ್ನೊಂದು ಮಗು ತೊಟ್ಟಿಲನ್ನು ಆಕ್ರಮಿಸುತ್ತದೆ. ಅಲಂಕೃತ ಸಾಲು ತೊಟ್ಟಿಲುಗಳಲ್ಲಿ ಮಲಗಿದ ಮುದ್ದು ಮೊಗದ ಹೂಮಕ್ಕಳ ಚಿತ ಕಣ್ಣಿಗೆ ಹಬ್ಬ. ಸ್ವಚ್ಛ ಸುಂದರ ಕೊಠಡಿ. ಮುಗ್ಧ ಸುಂದರ ಮಕ್ಕಳು. ಅಲ್ಲಲ್ಲಿ ಶ್ವೇತವಸನಧಾರಿಣೀ ದಾದಿಯರು ಹಂಸೆಗಳಂತೆ ಓಡಾಡುತ್ತ ಹೂ ಮಕ್ಕಳ ಆರೈಕೆ ಮಾಡುವ ಚಿತ್ರವೂ ಸುಸುಂದರವೇ.

ಎಲ್ಲಾ ಮಕ್ಕಳೂ ಅಂಗಾಂಗಗಳ ನ್ಯೂನ್ಯತೆಯಿಲ್ಲದೆ ಸುಖವಾಗಿ ದ್ದುವು. ರುಕ್ಮಿಣಿಯ ಮಗುವೊಂದೇ ಅದೃಷ್ಟಹೀನತೆಯಲ್ಲಿ ಜನ್ಮ ಪಡೆದು

ಕೊಂಡದ್ದು. ಅದನ್ನು ನೋಡುತ್ತಿದ್ದರೆ ಶ್ವೇತವಸನಧಾರಿಣಿಯರಿಗೂ ಮರುಕ-ಸಂಕಟ.

ಹುಟ್ಟಿದ ಮಕ್ಕಳೆಲ್ಲಾ ನಾಲ್ಕೈದು ದಿನಗಳಲ್ಲಿ ಮನೆಗೆ ಮರಳಿದರೆ ಈ ಮಗುವನ್ನು ಕರೆದುಕೊಂಬುವವರೇ ಇಲ್ಲ. ಮಗು ಅನಾಥವಾಗಿ ಉಳಿಯಿತು. ಮಕ್ಕಳ ತಜ್ಞರು ಮಗುವಿನ ಸ್ಥಿತಿಗತಿಯನ್ನು ಗಮನಿಸಿ "ಕೆಲವು ಕಾಲದನಂತರ ಆಪರೇಶ್ ಮಾಡಿದರೆ ಮಗುವಿನ ಕೈಕಾಲುಗಳು ಸರಿಹೋಗುವ ಸಾಧ್ಯತೆಯಿದೆ. ಮುಖ್ಯವಾಗಿ ಶಕ್ತಿ ಮೈಗೂಡಬೇಕು." ಎಂದು ಅಭಿಪ್ರಾಯ ಪಟ್ಟುದರಿಂದ ಎಲ್ಲರ ಹೃದಯದಲ್ಲೂ ಸಮಾಧಾನದ ಉಸಿರು ಹರಿದಾಡಿತು. ಮುಂದಿನ ಸುದಿನಗಳನ್ನು ಅಂತಃಚಕ್ಷುಗಳು ಎದುರು ನೋಡತೊಡಗಿದುವು.

ಡಾ|| ಲೈಲಾ ಮಗುವಿನ ದುಸ್ಥಿತಿಗೆ ಮರುಗಿ ಕರಗಿಹೋದಳು.

ಡಾಕ್ಟರುಗಳ ಒಕ್ಕೂಟ ಮಗುವನ್ನು ಆಸ್ಪತ್ರೆಗೆ ದತ್ತು ತೆಗೆದುಕೊಂಡು ಚಿಕಿತ್ಸೆ ಆರಂಭಿಸಿದರೆ ಎಲ್ಲರ ಸಹಾಯ-ಸಹಕಾರಗಳು ಬಂಡೆದ್ದು ಬಂದುವು. ತಿರುಚಿದ ಕಾಲುಗಳಿಗೆ ಶಸ್ತ್ರಚಿಕಿತ್ಸೆ-ಬಿಗಿಗಟ್ಟುಗಳ ನೋವು ಅಪಾರ. ಮಗು ತೊಟ್ಟು ಕಳೆದ ಹೂವಿನಂತೆ ದಿನವೆಲ್ಲಾ ಬಳಲಿ ಮಲಗುತಿತ್ತು. ಆದರ ಪರಿಪೋಷಣೆ ತೊಟ್ಟಿಲಲ್ಲೇ.

ಎಲ್ಲಾ ಡಾಕ್ಟರುಗಳೂ 'ಹಲೋ ಬೇಬಿ!' ಎಂದು ಮುದ್ದಿಸುವವರೇ.

ಕೈಕಾಲುಗಳ ಅಂಕುಡೊಂಕಿನಿಂದಲೋ ಏನೋ 'ನಾಗಿನಿ' ಎಂದು ಹೆಸರು ಪಡೆಯಿತು ಮಗು.

ಎಲ್ಲರ ಪೋಷಣೆ, ಎಲ್ಲರ ಮುದ್ದು ಮಗುವನ್ನು ಸಂರಕ್ಷಿಸಿತು.

ಮಗುವಿನ ಆರೈಕೆಯೊಂದಿಗೆ ಚಿಕಿತ್ಸೆಯೂ ಮುಂಬೆಳೆಯಿತು. ಡಾ|| ಲೈಲಾ ತನ್ನೆಲ್ಲಾ ಶ್ರದ್ಧೆಯನ್ನು ಧಾರೆಯೆರೆದಳು. ಶಸ್ತ್ರಚಿಕಿತ್ಸೆ ಯಶಸ್ಸಿನ ಮೆಟ್ಟಿಲೇರಿತು. ಮಗು ನೋವಿನಿಂದ ಕೂಡಿದಾಗ ತೀರಾ ಸಪ್ಪೆ. ನೋವು ಆರುಗಾದಾಗ ಬಾಯ್ದೆರೆದು ಎಳೆನಗು ಸೂಸುವುದು ಮುದ್ದು ಮುದ್ದಾಗಿ. ತಾಯಿಯ ಅರಿವಿಲ್ಲ. ತನ್ನವರ ಗುರುತಿಲ್ಲ. ನೋವು-ನಲಿವುಗಳಲ್ಲಿ ಬದುಕು. ಹೆಚ್ಚು ಮೈದುಂಬದಿದ್ದರೂ ಲವಲವಿಕೆಯ ಬೀಡು. ಕಾಲುಗಳು ನೇರ್ಪಟ್ಟನಂತರ ಕೈಗಳ ಚಿಕಿತ್ಸೆ. ಅಂತೂ, ಆರೇಳು ತಿಂಗಳಲ್ಲಿ

ಮಗುವಿನ ಕೈಕಾಲುಗಳ ಊನ ಮಂಗುಳವಾಯು. ಕೊನೆಗೂ ನೋವಿನ ಸಂಕಷ್ಟ ಹರಿದು ಸುಖಬಿಂದುವಿನೆಡೆಗೆ ತಿರುಗಿ ನಿಂತಿತು ಜೀವನ ಸೂಚಿಯ ಮುಳ್ಳು.

ಡಾ|| ಲೈಲಾ ಮಗುವಿನ ಹೊಣೆಗಾರಿಕೆಯನ್ನು ಸಂಪೂರ್ಣ ಹೊತ್ತ ವಳು. ಅದು ಆರೋಗ್ಯ ಹೊಂದಿ ಚಿಕಿತ್ಸೆಯಿಂದ ಹೊರತಾದ ಬಳಿಕ ಮನೆಗೆ ಕರೆದೊಯ್ಯುವ ಯೋಚನೆಗೆ ಶರಣಾದಳು.

ಆಸ್ಪತ್ರೆಗೆ ಬಂದೊಡನೆಯೇ ನಾಗಿನಿಯನ್ನು ನೋಡಿ ಮುದ್ದಿಡುವುದು ತನ್ನ ಪ್ರಥಮ ಕರ್ತವ್ಯ.

"ನಾಗಿನೀ ಮೈ ಚೈಲ್ಡ್!"

ಎಂದಳೆಂದರೆ ಮಗುವಿನ ಮುದ್ದು ನಗುವಿನ ಕೇಕೆ ಮಾಡುಮುಟ್ಟು ವಂತೆ ಮೊಳಗುತ್ತದೆ. ಆಗ ಅವಳು ಎತ್ತಿ ಮುದ್ದಾಡದೆ ದೂರ ಇದ್ದಳೆಂದರೆ ನಾಗಿನಿಯ ದುಃಖ ಅಪಾರ. ಅತ್ತು ಕರೆದು ರಂಪಾಟ ಮಾಡುವುದರಿಂದ ಎತ್ತಿ ಮುದ್ದಾಡಲೇಬೇಕು.

ಅತ್ತಿತ್ತ ಅಡ್ಡಾಡುವಾಗ ಸಂಜೆಯಲ್ಲಿ ಮನೆಗೆ ಹಿಂದಿರುಗುವಾಗ ಒಡನಾಟ ಮರೆಯುವಂತಿಲ್ಲ. ಮನೆಗೆ ಕರೆದೊಯ್ದ ನಂತರ ಇಂತಹ ಆರೈಕೆ ಸಿಗುವುದೋ ಇಲ್ಲವೋ ಈಗಂತೂ ಮಗು ಸುಖವಾಗಿದೆ.....ಎಂಬ ಯೋಚ ನೆಯೂ ಬರುತ್ತೆ. ಅವಳಿಗಾಗಿಯೇ ಸರಿಯಾದ ನರ್ಸ್ ಹೊಂದದೆ ಕರೆದೊ ಯ್ಯುವಂತಿಲ್ಲ. ಆದ್ದರಿಂದ ಸ್ಥಳಾಂತರ ಮುಂದುವರಿಯುತಿತ್ತು. ಅಲ್ಲದೆ, ಆಸ್ಪತ್ರೆಯಲ್ಲಿದ್ದರೆ ಆಗಾಗ ನೋಡಬಹುದು. ಮನೆಗೊಯ್ದರೆ ತಾನಿಲ್ಲಿ ಮಗು ಅಲ್ಲಿ ಎಂಬ ಚಿಂತೆಯೂ ಕಾಡುತ್ತದೆ.

* * * *

ವಿಶ್ವ ಮೆಡಿಕಲ್ ಕಾಂಗ್ರೆಸ್ ಕರೆದಿದ್ದ ಮೀಟಿಂಗ್‌ನಲ್ಲಿ ಭಾಗವಹಿಸು ವುದಕ್ಕಾಗಿ ಬಂದಿದ್ದ ಡಾ|| ಮಾರ್ಗರೆಟ್ ಟೇಲರ್ ಆಸ್ಪತ್ರೆಯ ಸಂದರ್ಶ ನಕ್ಕೆ ಬಂದಳು. ವಾರ್ಡ್‌ವಾರ್ಡ್‌ಗಳನ್ನು ಸುತ್ತಿ ಸುತ್ತಿ ಮಕ್ಕಳ ವಿಭಾಗಕ್ಕೆ ಬಂದಾಗ ನಾಗಿನಿ ಎದುರಾದಳು. ತಿಪ್ಪ ತಿಪ್ಪ ಹೆಜ್ಜೆ ಇಡುವ ಮುದ್ದು ಮಗು ನಾಗಿನಿ.

ಡಾ|| ಲೈಲಾ ಮಗುವಿನ ಕರುಣ ಕಥೆಯನ್ನು ವಿವರಿಸಿ ನುಡಿದಳು,

"ಡಾ|| ಟೇಲರ್ ಕೇಳಿ, ಈಗ ನಾಗಿನಿ ಸಂಪೂರ್ಣ ನ್ಯೂನತೆಯಿಂದ ಮುಕ್ತಳಾಗಿದ್ದಾಳೆ. ಕೈಕಾಲುಗಳಲ್ಲಿ ಕಲೆಯೂ ಉಳಿಯಲಾರದು. ಮುಖ್ಯವಾಗಿ ಶಕ್ತಿ ಮೈಗೂಡಬೇಕು."

"ಪೂರ್ ಬೇಬಿ! ಬಹಳ ಮುದ್ದಾದ ಮಗು!"

ಎರಡೂ ಕೈಗಳನ್ನು ನೀಡಿ "ಕಮ್ ಬೇಬಿ!" ಎಂದರೆ ನಾಗಿನಿಯು ಬಹುದಿನಗಳ ಸ್ನೇಹಿತಳಂತೆ ಚಿಮ್ಮಿ ಬಂದಳು ಡಾ|| ಟೇಲರ್ ಕೈಗೆ!

"ಓ.....! ಇದೇನೋ ವಿಶೇಷ!"

ಅನೇಕ ದನಿಗಳು ಮೊಳಗಿದುವು.

"ಹೊಸಬರನ್ನು ಅಷ್ಟಾಗಿ ಹಚ್ಚಿಕೊಳ್ಳುವವಳಲ್ಲ. ನಿಮ್ಮ ಬಳಿ ಎಷ್ಟೊಂದು ಸರಾಗ?"

ಡಾ|| ಲೈಲಳ ಮಾತಿಗೆ ಆಶ್ಚರ್ಯ ವ್ಯಕ್ತಪಡಿಸಿ ಅತ್ಯಂತ ಪ್ರೇಮ ವಿಶ್ವಾಸಗಳಿಂದ ಮಗುವನ್ನು ಮುದ್ದು ಮಾಡಿದಳು. ನಾಗಿನಿ 'ಅಮ್ಮಮ್ಮ' ಎಂದಳು ಪುಟ್ಟಬಾಯಿಯನ್ನು ತೆರೆದು.

"ಅಹಹ! ಎಂತಹ ಸ್ವೀಟಿ! ಪೆಪ್ಪರ್‌ಮೆಂಟ್ ಸ್ವೀಟಿ! ನಿನ್ನ ವಿಟಮಿನ್ ಮಾತ್ರೆಯಂತೆ ನುಂಗಿಬಿಡುವೆ! ಎಂದು ಮನಸಾರೆ ಮುದ್ದಿಸುತ್ತ ಮುತ್ತಿನಮಳೆಗರೆದಳು ಡಾ|| ಟೇಲರ್. ಮಗುವಿಗೂ ಅಷ್ಟೇ ಪ್ರೇಮ ನಳಿದೋಳಿಂದ ಕೊರಳನ್ನು ತಬ್ಬಿ ಹಿಡಿದು ಕಿಲಕಿಲ ನಕ್ಕಿತು. ಆ ಸಂತಸ ಪೂರ್ಣ ಮುಖಬಿಂಬವನ್ನು ನೋಡುತಿದ್ದ ಡಾ|| ಟೇಲರ್ ಸಂತಸವಾರ್ಧಿಯಲ್ಲಿ ಕೊಚ್ಚಿಹೋದಳು.

ಡಾ|| ಲೈಲಾ-ಳ ಬೆನ್ನು ತಟ್ಟಿ ನುಡಿದಳು ಡಾ|| ಟೇಲರ್ "ನೀನು ಒಂದು ಮಗುವಿಗೆ ಜೀವನ ಕೊಟ್ಟು ಉಪಕಾರ ಮಾಡಿದ್ದಿ. ಇದರ ತಾಯಿ ಬೀದಿಯಲ್ಲಿ ಕೈಬಿಡದೆ ಆಸ್ಪತ್ರೆಯಲ್ಲಿ ಬಿಟ್ಟುಹೋಗಿ ಉಪಕರಿಸಿದ್ದಾಳೆ. ನೋಡು, ಸಮಯ ಸಂದರ್ಭಗಳಲ್ಲಿ ದೇವರು ಹೇಗೆ ಪರೋಕ್ಷವಾಗಿ ಸಹಾಯ ಮಾಡುತ್ತಾನೆ? ಸಾವು-ನೋವು ಸುಮ್ಮಸುಮ್ಮನೆ ಬರುವುದಿಲ್ಲ. ಸುಖ-ದುಃಖಗಳಿಗೆ ಒಂದು ಗಡು ಇದ್ದೇ ಇರುತ್ತದೆ. ಅದನ್ನು ಅರಿತುಕೊಳ್ಳಲಾರದ ನಾವು ಪರದಾಡುತ್ತೇವೆ."

"ನಿಜ ಡಾಕ್ಟರ್ ! ಬದುಕಿ ಬಾಳುವ ಯೋಗವಿದ್ದರೆ ಸಾವು ಮುಟ್ಟು ವುದು ಸಾಧ್ಯವಿಲ್ಲ. ಸಾವಿನ ಉಡಿ ಸೇರುವ ಯೋಗವಿದ್ದರೆ ಬದುಕು ಅಸಾಧ್ಯ."

"ನಿಜ....ನಿಜ !" ತಲೆದೂಗಿದಳು ಡಾ|| ಟೇಲರ್.

* * * *

ಅನಂತರ ಡಾ|| ಟೇಲರ್ ನಾಗಿನಿಯ ಆತ್ಮೀಯ ಬಂಧುವಾದಳು. ದಿನವೂ ಒಂದಲ್ಲ ಒಂದು ಹೊತ್ತಿನಲ್ಲಿ ಭೇಟಿ. ಅವಳಿಗೆ ಬೇಕುಬೇಕಾದ ಪದಾರ್ಥಗಳು, ಆಟಿಕೆಗಳು ಕೈತುಂಬ ಹಿಡಿದುಕೊಂಡೇ ಬರುತ್ತಾಳೆ. ನಾಗಿನಿಯೊಂದಿಗೆ ಅಷ್ಟಿಷ್ಟು ಹೊತ್ತು ಆನಂದದಿಂದ ಕಳೆದು ನಗೆಯ ಹೊನಲು ಹರಿಸಿ ಆನಂದವನ್ನು ಅತ್ಯಾನಂದಿತಗೊಳಿಸಿ ಹೊರಟರೆ ಅವಳ ಕೊರಳುಕಟ್ಟಿ ಮುಸಿಮುಸಿ ಅಳುವುದು ನಾಗಿನಿಯ ವಾಡಿಕೆ. ಅನಂತರ ಡಾ|| ಟೇಲರಳ ಕಣ್ಣುಗಳು ತೆಕ್ಕನೆ ತೊಯ್ಯುತ್ತಿದ್ದುವು.

ಡಾ|| ಟೇಲರಳು ಮೂರುತಿಂಗಳು ಇಲ್ಲಿಗೆ ಕಾರ್ಯಾರ್ಥ ಬಂದವಳು. ನಾಗಿನಿಯಲ್ಲಿ ಏನೋ ಒಂದು ಬಗೆಯ ಅಲೌಕಿಕ ಸಂಬಂಧ ಎನಿಸುವಷ್ಟು ಘನವಾದ ಬಾಂಧವ್ಯ ಬೆಳೆದು ಹೆಮ್ಮರವಾಯಿತು.

ನಾಗಿನಿ ಚೆನ್ನಾಗಿ ನಡೆಯುವ ಅಭ್ಯಾಸ ಮಾಡಿಕೊಂಡಳು. ಕಾಲು ಕೈಗಳಲ್ಲಿ ನ್ಯೂನತೆಯಾಗಲೀ ಕಲೆಯಾಗಲೀ ಉಳಿದಿರಲಿಲ್ಲ. ಎಲ್ಲಾ ಆರೋಗ್ಯವಂತ ಮಕ್ಕಳಂತೆಯೇ ಮುದ್ದುಮುದ್ದಾಗಿ ನಡೆಯಿತು ಮಗು. ಡಾ|| ಟೇಲರ್ ತಂದುಕೊಟ್ಟ ಆಟಿಕೆಯ ಕರಡಿಮರಿಯನ್ನು ಎದೆಗಪ್ಪಿ ಹೊರಲಾರದೆ ಹೊತ್ತು ನಡೆಯುತ್ತಿದ್ದರೆ ನೋಡುವವರ ಕಣ್ಣಿಗೆ ಮುದ್ದಿನ ಮುತ್ತುಗಳನ್ನು ನೀಡುವಷ್ಟು ಮನಮೋಹಕ.

ಡಾ|| ಟೇಲರಳ ಮೂರು ತಿಂಗಳ ಕೆಲಸದ ಅವಧಿ ಮುಗಿಯುತ್ತಾ ಬಂತು. ಮೂರು ತಿಂಗಳಿಂದ ಮುದ್ದು ಮಗುವಿನೊಂದಿಗೆ ಪಡೆದುಕೊಂಡ ಪ್ರೇಮಾನುಬಂಧ ಸಾಮಾನ್ಯವಲ್ಲ. ಮಕ್ಕಳಿಲ್ಲದ ಒಡಲಿಗೆ ಕ್ಷಣವೂ ಬಿಟ್ಟಿರ ಲಾರದಷ್ಟು ವ್ಯಾಮೋಹ. ಡಾ|| ಲೈಲಾಳನ್ನು ಭೇಟಿಯಾದಾಗ ನುಡಿದಳು ಡಾ|| ಟೇಲರ್ "ಡಾಕ್ಟರ್ ! ಈ ಮಗುವನ್ನು ನಾನು ದತ್ತು ತೆಗೆದುಕೊ

ಳ್ಳುವ ಯೋಚನೆಯಲ್ಲಿರುವೆ. ಖಂಡಿತಾ ನೀನು ಒಲ್ಲೆ ಎನ್ನಬಾರದು. ಇದು ನನ್ನ ಆತ್ಮಪೂರ್ವಕ ಬೇಡಿಕೆ. ಏನು ಹೇಳುತ್ತೀ?"

ಆ ಪ್ರಶ್ನೆ ಕರ್ಣಪಟಲಗಳ ಮೇಲೆ ಬಿದ್ದಾಗ ದಂಗುಬಡಿದು ಹೋದಳು, ಲೈಲಾ.

"ಅಯ್ಯೋ! ನನ್ನ ಮಗು!" ಒಡಲು ಚೀರಿತು.

"ಡಾಕ್ಟರ್! ಎಂತಹ ಪ್ರಶ್ನೆ ಕೇಳುತಿದ್ದೀರಿ?" ದನಿ ಹೃದಯದಾಳ ದಿಂದ ಹೊರಬಿತ್ತು.

"ದಯಮಾಡಿ ಕ್ಷಮಿಸು, ಡಾಕ್ಟರ್! ನನಗೆ ಮಕ್ಕಳಿಲ್ಲ. ಸ್ವಂತ ಮಗುವಿನಂತೆಯೇ ನೋಡಿಕೊಳ್ಳುವೆ! ನಿನಗೆ ಮಕ್ಕಳಿದ್ದಾರೆ! ದತ್ತುವಾಗಿ ಕೊಡುವುದರಲ್ಲಿ ಏನೇನೂ ತೊಂದರೆಯಿಲ್ಲ!

ಅವಳ ಒಡಲಾಸೆ ಕಣ್ಣುಗಳಲ್ಲಿ ಛಾಯೆಯಂತೆ ಸುಳಿಯಿತು. ಮುಖ ಭಾವ, ಗೋಗರೆವ ದನಿ, ಕಣ್ಣುಗಳಲ್ಲಿ ಹೊಮ್ಮುವ ಆಸೆಯ ಛಾಯೆ ತನ್ನ ಅಸ್ತಿತ್ವವನ್ನೇ ಅಲುಗಾಡಿಸಿಬಿಟ್ಟಿತು. ಡಾ|| ಲೈಲಾ ನುಡಿಯಲಾರಳು-ಬಿಡ ಲಾರಳು. ವ್ಯೆಮನಗಳನ್ನು ಹೆಡೆಮುರಿಗಟ್ಟಿತು ಸನ್ನಿವೇಶ. ತನಗೆ ಮೂವರು ಹೆಣ್ಣು ಮಕ್ಕಳಿರುವುದು ದಿಟ. ಬೆಳೆದ ಮಕ್ಕಳು. ಕಾಲೇಜಿನ ಹಂತ ಏರಿ ನಿಂತವರು. ಇನ್ನು ಈ ಮಗುವನ್ನು ಸಾಕುವುದೆಂದರೆ ಹೊಸ ದಾಗಿಯೇ ವ್ಯವಸ್ಥೆಯಾಗಬೇಕು. ಮುಂದಿನ ತೊಂದರೆಯನ್ನೂ ತೂಗಿ ನೋಡಿತು ಮನಸ್ಸು. ಆಗ ತಾನೇತಾನಾಗಿ ತಲೆದೂಗಿದಳು ಲೈಲಾ. ಆದರೂ, ಬಿಟ್ಟುಕೊಡುವುದು ಎಂದರೆ ತನ್ನೊಡಲ ಕುಡಿಯನ್ನೇ ಬಿಟ್ಟುಕೊ ಟ್ಟಷ್ಟು ಹೃದಯಭಾರ. ಸ್ವಲ್ಪಹೊತ್ತು ಯೋಚಿಸಿ ಒಪ್ಪಿಗೆ ನೀಡಬೇಕಾದರೆ ತನ್ನ ಅಸ್ತಿತ್ವವೇ ಕಳೆದುಹೋದಂತಾಯಿತು. ಕೊನೆಗೂ, ಒಪ್ಪಿಗೆ ಕೊಟ್ಟ ಕೂಡಲೆ ಅವಳನ್ನು ಎರಡೂ ಕೈಗಳಿಂದ ಆನಂದಪೂರ್ಣವಾಗಿ ಗಾಢಾಲಿಂಗನ ಮಾಡಿಕೊಂಡಳು ಡಾ|| ಟೇಲರ್.

ಇಬ್ಬರ ಕಣ್ಣುಗಳಲ್ಲೂ ಆನಂದಾಶ್ರುಗಳು ಮೊಳೆತುವು.

"ಡಾಕ್ಟರ್....!" ಎಂದಳು ಲೈಲಾ ಮುಂದೆ ಮಾತು ಹೊರಡಲಿಲ್ಲ. ಕಂಠಾರೋಧವಾಯಿತು. ಅಲ್ಲಿಗೇ ಸುಮ್ಮನಾದಳು. ಆ ಮುಹೂರ್ತದಲ್ಲಿ ಜಗತ್ತು ಶೂನ್ಯವಾಗಿ ತೋರಿತೇನೋ. ಬಿಸಿಯುಸಿರು ಬಿಟ್ಟಳು.

ಡಾ|| ಟೇಲರ್ ಅವಳನ್ನು ಸಮಾಧಾನಗೊಳಿಸಿ ಪ್ರೀತ್ಯಾದರದಿಂದ ಸಂತೈಸಿ ಮಗುವನ್ನು ದತ್ತುವಾಗಿ ಪಡೆಯಲು ಅಗತ್ಯವಾದ ಎಲ್ಲಾ ಕ್ರಮ ಗಳನ್ನೂ ಕೈಕೊಂಡಳು. ನ್ಯಾಯಾಲಯದಲ್ಲಿ ತಾನೇ ಸಮಸ್ತ ಭಾರವನ್ನು ಹೊರುವುದಾಗಿ ಘೋಷಿಸಿ ತನ್ನ ಬೇಡಿಕೆಗೆ ಮಾನ್ಯತೆ ಪಡೆಯಬೇಕಾದರೆ ಒಂದೆರಡು ತಿಂಗಳೇ ಬೇಕಾದುವೇನೋ....ಆ ಎಲ್ಲ ಕ್ರಮವನ್ನೂ ತಾಳ್ಮೆ ಯಿಂದ ಸಹಿಸಿ ಎಲ್ಲಾ ದಸ್ತಾವೇಜುಗಳಿಗೆ ಸಹಿ ಹಾಕಿದಾಗ ಹೃದಯ ಸಮುದ್ರದ ಹೆದ್ದೆರೆಗಳು ಆನಂದದಿಂದ ತುಂಬಿ ತುಯ್ಯಲಾಡಿದುವು.

*　　*　　*　　*

ಕೊನೆಗೊಮ್ಮೆ ಹೊರಡುವ ದಿನ ಬಳಿ ಸಾರಿ ಬಂತು. ಶುಕ್ರವಾರದ ಸಾಯಂಸೊಬಗಿನ ಪೆಂಪು ಎಲ್ಲೆಲ್ಲೂ ತುಂಬಿ ಹರಡಿತ್ತು. ಶಾಂತ ಮನೋ ಹರ ವಾತಾವರಣದಲ್ಲಿ ಜಗತ್ತು ಮೈಮರೆತಂತೆ ನಿತ್ಯ ಸುಂದರವಾಗಿದೆ. ವಿಶ್ರಾಂತಿಯತ್ತ ಸರಿವ ವಿಶ್ವಜಗತ್ತು ಭ್ರಾಮಕ ಲೋಕದಲ್ಲಿ ಮುಳುಗಿ ಹೋಗಿದೆ. ತಣ್ಣನೆಯ ವಾತಾವರಣ ಹಿತಕರ. ಶುಕ್ರವಾರ ಸಂಜನಿಸಿದ ಶಿಶು ಶುಕ್ರವಾರವೇ ಹೊರಡುವ ಸಜ್ಜು.

ಡಾ|| ಟೇಲರ್ ಹೊರಡಲು ಅಣಿಯಾಗಿ ಆಸ್ಪತ್ರೆಗೆ ಧಾವಿಸಿಬಂದಳು. ನಾಗಿನಿಯನ್ನು ವರ್ಷಾವಧಿ ಸಾಕಿ ಸಲಹಿದ್ದ ಡಾ|| ಲೈಲಾ ಮತ್ತು ಆತ್ಮೀಯ ಸಿಬ್ಬಂದಿ ಬೀಳ್ಕೊಡಲು ಅಣಿಯಾಗಿದ್ದರು ಭಾರವಾದ ಹೃದಯ ಗಳನ್ನು ಹೊತ್ತು.

ಡಾ|| ಟೇಲರ್ ಮಗುವನ್ನು ಎತ್ತಿಕೊಂಡು ಎಲ್ಲರಿಗೂ ವಿದಾಯ ಹೇಳುತಿದ್ದರೆ ಮಗುವಿನ ಕೆನ್ನೆಗಳು ಹೂಮುತ್ತಿನಿಂದ ತುಂಬಿಹೋದುವು. ಅಗಲಿಕೆಯ ದುರ್ದಾಂತ ಮುಹೂರ್ತದಲ್ಲಿ ಎಲ್ಲರ ಮುಖಮುದ್ರೆಯಲ್ಲೂ ಸುಖ-ದುಃಖಗಳ ನೆರೆ ಹರಿದಾಡಿಹೋಯಿತು. ಡಾ|| ಲೈಲಾ ತುಂಬು ಹೃದಯದಿಂದ ಮಗುವನ್ನು ಬೀಳ್ಕೊಟ್ಟಳು.

ಡಾಕ್ಟರುಗಳ ತಂಡ ಮೆಟ್ಟಿಲಿನ ಬಳಿ ಬಂದು ನೆರೆಯಿತು.

ಕಾರಿನಲ್ಲಿ ಕುಳಿತ ಮಗು ಎಲ್ಲರಿಗೂ ಟಾಟಾ ಹೇಳಿ ಕೈಯಾಡಿಸು ತಿದ್ದಂತೆ ಅನಿರೀಕ್ಷಿತವಾಗಿ ಬಂದಿದ್ದಾಳೆ ರುಕ್ಮಿಣಿ ಅಕ್ಷತೆಯಿಟ್ಟು ಕರೆದಂತೆ!

ಅವಳನ್ನು ಕಂಡು ಎಲ್ಲರೂ ಭ್ರಮಾಲೋಕವನ್ನು ಕಂಡಂತೆ ಕಣ್ಣಿಟ್ಟು ಮಿಕಮಿಕ ನೋಡಿದರು ! ರುಕ್ಮಿಣಿಯೂ ಆಶ್ಚರ್ಯ ವಿಸ್ತೃತನಯನಗಳಿಂದ ಪಿಳಿಪಿಳಿ ನೋಡಿದಳು ! ಡಾ|| ಟೇಲರಳೊಂದಿಗೆ ಹೊರಟ ಮಗು, ಬೀಳ್ಕೊಡುತಿದ್ದ ಆಸ್ಪತ್ರೆಯ ವೈದ್ಯವೃಂದ ಮತ್ತು ಸಿಬ್ಬಂದಿ. ಒಮ್ಮೆಲೇ ಟಾಟಾ! ಟಾಟಾ ! ಮನಮುಟ್ಟುವಂತಹ ಮೊಳಗು! ಎಲ್ಲವನ್ನೂ ನೋಡಿಯೇ ನೋಡಿದಳು ರುಕ್ಮಿಣಿ. ಆ ಗಳಿಗೆಯಲ್ಲಿ ಅವಳಿಗೆ ಏನೆಂಬುದು ಅರ್ಥವೇ ಆಗಿರಲಿಲ್ಲ.

"ನಾಗಿನಿಗೆ ಎಂದಿನಂತೆ ಇಲ್ಲೆಲ್ಲಿಯೋ ಹೋಗಿಬರುವ ಅಂದಾಜು!" ಎಂದಳು ಡಾ|| ಲೈಲಾ.

ಕಾರು ಕ್ಷಣಾರ್ಧದಲ್ಲಿ ಸರ್ರನೆ ಹರಿದು ಕಣ್ಮರೆಯಾಯಿತು.

ಅನೇಕರ ಕಣ್ಮನಗಳು ತೊಯ್ದಿದ್ದುವು.

ರುಕ್ಮಿಣಿ.....ಕನಸು ಕಂಡವಳಂತೆ ಆ ಚಿತ್ರವನ್ನು ತನ್ನಲ್ಲೇ ಜ್ಞಾಪಿಸಿಕೊಳ್ಳುತಿದ್ದಾಳೆ.

ಮರದ ಪೊದರಿನಲ್ಲಿ ಅಡಗಿ ಕುಳಿತು ಹಾಡುತಿತ್ತು ಕೋಗಿಲೆ ಕೂಊಊವೂ ಕೂಊಊವೂಊಊ



# ಚೊಗ್ಯಾಲ್ ಅರಮನೆ ದರ್ಶನ

ಸಬಂಧುರ್ಯೋಹಿತೇಪ್ಸುಸ್ಯಾಶ್ಚ ಪಿತಾ ಯಸ್ತು ಪೋಷಕಂ

ಗಗನ ನೀಲ ವರ್ಣದ ಕ್ಯಾಡಿಲಾಕ್ ಕಾರ್ ಒಂದೇಸಮನೆ ಓಡು ತ್ತಲೇ ಇತ್ತು.

ಹಿಂದೆಂದೂ ಕಂಡಿರದ ಸಿಕ್ಕಿಂ ರಾಜ್ಯ. ಹಿಮಾಲಯ ತಪ್ಪಲಿನ ಸಸ್ಯ ಸಮೃದ್ಧಿಯಲ್ಲಿ ನೆಲೆಗೊಂಡ ನಗರಿ. ಬೆಟ್ಟದ ಇಳಿಜಾರುಗಳಲ್ಲಿ ಪುಷ್ಪ ಪ್ರದರ್ಶನ ನಡೆಸಿರುವಂತೆ ಕಂಡುಬರುವ ವರ್ಣವರ್ಣಾಂತ ಪುಷ್ಪಕೋಟಿ. ಪ್ರಕೃತಿಯು ವರದ ಹಸ್ತಗಳಿಂದ ವರದಾನ ಮಾಡಿದ ಸಾನು ಪ್ರದೇಶ. ಶ್ಯಾಮಲಾ ಸಸ್ಯರಾಜಿಯನ್ನು ನೋಡಿ ನೋಡಿ ಕಣ್ತುಂಬಿಕೊಳ್ಳುವಾಗ ಮಾತೇ ಹೊರಡದಾದಷ್ಟು ಆನಂದ ಮುಗ್ಧತೆಯಲ್ಲಿ ಮೈಮರೆತಳು.

"ಅಮ್ಮಾವರೇನು ಹೀಗಾಗಿಬಿಟ್ಟರಿ ?" ಹಾಸ್ಯ ಪ್ರಧಾನವಾಗಿ ಕೇಳಿದ ಮಾಬು.

ಇಕ್ಕಟ್ಟಾದ ತಿರುವಿನಲ್ಲಿ ಕಾರನ್ನು ನಿಧಾನವಾಗಿ ತಿರುಗಿಸಿಕೊಂಡು ಮಡದಿಯ ಕಡೆ ತುಂಟ ನಗೆ ಬೀರಿದ. ಕಣ್ಣುಗಳಲ್ಲಿ ಭಾವಾತ್ಮಕತೆ ತುಂಬಿ ತುಳುಕಿತು.

"ನಾನು ಕಾಲೇಜ್ ಪ್ರವಾಸದಲ್ಲಿ ಸಿಕ್ಕಿಂ, ಭೂತಾನ್, ನೇಪಾಳ ಗಳನ್ನು ಸಂದರ್ಶಿಸುವ ಸಲುವಾಗಿ ಹಣ ಕಟ್ಟಿದ್ದೆ. ದುರದೃಷ್ಟದಿಂದ ಆಗಲೇ ವಿಷಮಶೀತ ಜ್ವರ ಹಿಡಿದು ಮಲಗಿದುದರಿಂದ ಪ್ರವಾಸ ಮಾಡ ಲಾಗಲಿಲ್ಲ. ಅಂದು ಬಹಳ ನಿರಾಸೆಯಿಂದ ಕಣ್ಣೀರು ಕರೆದಿದ್ದೆ. ಅನಂತರ ಈ ಪ್ರವಾಸ ಕೈಗೊಳ್ಳಲು ಸಾಧ್ಯವಾಗಿರಲಿಲ್ಲ. ಈಗ ಸಮಯ ಕೂಡಿ ಬಂದುದು ವಿಧಿವಶಾತ್ತಾಗಿ."

ಇಬ್ಬರೂ ನಕ್ಕು ಬಿಟ್ಟರು ಆನಂದವೇ ಮೈವೆತ್ತಿ ಬಂದಂತೆ ನಲಿಯುತ್ತ.

"ಇಲ್ಲಿ 'ಯೇತಿ' ಓಡಾಡುತ್ತೆ ಎನ್ನುತ್ತಾರೆ. ನೀವದರ ಹೆಜ್ಜೆ ನೋಡಿರುವಿರಾ ?"

"ಒಮ್ಮೆ ನೋಡುವ ಅವಕಾಶ ಒದಗಿತ್ತು. ದೊಡ್ಡದೊಡ್ಡ ಎರಡು ಹೆಜ್ಜೆಗಳ ಪ್ರಾಣಿ ನಡೆದು ಹೋದಂತೆ ಹಿಮ ಹಾಸಿನ ಮೇಲೆ ಹೆಜ್ಜೆ ಮೂಡಿರುವುದನ್ನು ಅನೇಕರು ಕಂಡಿದ್ದಾರೆ."

"ಅರೆರೆ! ಅದು ಎಲ್ಲಿ ಯಾವ ಕಡೆ ಹೋಗಿದೆ ಎಂಬುದನ್ನು ಹೆಜ್ಜೆಯ ಜಾಡಿನಲ್ಲೇ ತಿಳಿಯಬಹುದಲ್ಲಾ ಅಷ್ಟಕ್ಕೇ ಬಿಟ್ಟುದೇಕೆ ?"

"ಹೆಜ್ಜೆಯ ಗುರುತು ಎಲ್ಲಾ ಕಡೆಯೂ ಮೂಡಿರುವುದಿಲ್ಲ. ಅಲ್ಲಲ್ಲಿ ಬಂಡೆಗಳು, ಮರಗಳು ಸಿಗುತ್ತವೆಯಾದ್ದರಿಂದ ಅಲ್ಲಿಗೇ ಗುರುತುಗಳು ನಿಂತುಹೋಗುತ್ತವೆ. ಅಂದಮೇಲೆ ಮುಗಿಯಿತಲ್ಲ.....ಆದರೂ ಅದನ್ನು ಪೂರ್ಣ ನಂಬಲಾರೆ. ದೊಡ್ಡ ದೊಡ್ಡ ಕರಡಿಗಳ ಹೆಜ್ಜೆಗಳಿರಲಿಕ್ಕೂ ಸಾಕು."

"ಓ..... ಹಾಗೊ ? ಎಲ್ಲಾ ಊಹೆ, ಕಣ್ಣಿನಿಂದ ಕಂಡವರಿಲ್ಲ. ನಾನು ಕೇಳಿದ್ದೂ ಅಷ್ಟೆ. ಅಂತೂ, ಬಹಳ ಸುಂದರವಾದ ಪ್ರದೇಶ. ನೀವು ಬಹಳ ಪುಣ್ಯವಂತರು !"

"ಆ ಪುಣ್ಯ ಮುಗಿದುಹೋಗಿ ಈಗಾಗಲೇ ಹತ್ತು ವರ್ಷ ಕಳೆಯುತ್ತಾ ಬಂತು."

"ನೀವು ನಾಗಪುರಕ್ಕೆ ಬಂದು ಹತ್ತು ವರ್ಷ ಕಳೆಯಿತೇ ?"

"ಇನ್ನೇನು ಕಳೆಯಲಿದೆ.....ಇಲ್ಲಿಗೆ ರೈಲು-ವಿಮಾನ ಸೌಕರ್ಯವಿಲ್ಲದುದರಿಂದ ನಮಗೆ ಕಷ್ಟವೆನಿಸುತ್ತೆ. ಅಂಕುಡೊಂಕಿನ ಹಾದಿ ತುಂಬ ಪ್ರಯಾಸಕರ ಡ್ರೈವಿಂಗ್ !"

ಸ್ವಲ್ಪ ಹೊತ್ತು ಮೌನಗತಿಯಲ್ಲಿ ಉರುಳಿತು.

"ಈ ಇಳಿಜಾರು ಪ್ರದೇಶಗಳಲ್ಲಿ ಎಲ್ಲಿ ನೋಡಿದರೂ ಸಂದಿ ಸಂದಿಗಳಲ್ಲಿ ಮನೆಗಳಿರುವುದು ಚಿತ್ರಮಯವಾಗಿ, ಸೌಂದರ್ಯದ್ಯೋತಕವಾಗಿ, ವನರಾಜಿಯ ಬೃಹತ್ ಕೋಶವಾಗಿ ವಿಜೃಂಭಿಸುತ್ತಿರುವುದು ಎಂತಹ ಹೆಮ್ಮೆ ಅಲ್ಲವೇ ?" ಹಾಲ್ಸಕ್ಕರೆಯ ಸವಿ ಸೂಸಿ ನುಡಿದಳು ಅವಳು.

"ನಿನಗೀಗ ಹೊಸದು ಹಾಗೆನಿಸುತ್ತೆ. ಕೆಲವು ದಿನ ಇದ್ದು ನೋಡು !"

"ಖಂಡಿತ ಬೇಸರವಾಗುವುದಿಲ್ಲ ಮಾಬೂ. ಎಷ್ಟು ದಿನವಾದರೂ ಇರಬಲ್ಲೆ."

"ಹಾಗಾದರೆ ನೀನಿಲ್ಲೇ ಇದ್ದುಬಿಡು. ನಾನು ನಾಗಪುರಕ್ಕೆ ಹೊರಡುವೆ !"

ಇಬ್ಬರೂ ಕಿಲಕಿಲ ನಕ್ಕರು ಹಾಸ್ಯಪ್ರಧಾನವಾಗಿ.

ಮಾಬು ಅವಳನ್ನು ಬಳಸಿ ಹಿಡಿದು ತಲೆಗೆ ತಲೆಯನ್ನು ಮುದ್ದಿನಿಂದ ಗಟ್ಟಿಸಿ ನುಡಿದ,

"ಇನ್ನು ಗಾಂಗ್‌ಟೊಕ್ ನಗರಿಯನ್ನು ಪ್ರವೇಶಿಸುತ್ತೇವೆ !"

"ಹೌದೆ ? ಸಿಕ್ಕಿಂ ರಾಜ್ಯದಲ್ಲಿ ದೇವೇಂದ್ರ ನೆಲೆಸಿರಬಹುದು. ಇದನ್ನೇ 'ನಂದನವನ' ಎಂದು ಪುರಾಣ ಕರೆದಿದೆ ಎನಿಸುತ್ತೆ. ಅಂತೂ ಇದೊಂದು ದಿವ್ಯ ತಾಣ. ಪುಷ್ಪಲೋಕದ ಪರಮ ಕಾಶಿ !"

"ನಿನಗೆ ಇಷ್ಟು ಕಾವ್ಯಸಂಪತ್ತಿ ಮೂಡಿದುದು ಯಾವಾಗ ?"

ತನ್ನ ಜೊಂತೆ ಕೂದಲ ರಾಶಿಯಲ್ಲಿ ಬೆರಳಾಡಿಸುತ್ತ ಪರಮಾನಂದ ದಿಂದ ನುಡಿದಳು ಶ್ಯಾಮಲಾ,

"ಮುಖ್ಯವಾಗಿ ನಿಮಗೆ ಕಾವ್ಯಪ್ರಜ್ಞೆ ಮೂಡಬೇಕಿತ್ತು. ಇಲ್ಲಿ ಹುಟ್ಟಿ ಬೆಳೆದು ಇಲ್ಲಿಯ ವಾತಾವರಣವನ್ನು ಮೈಗೊಂಡುದು ಎಲ್ಲಿ ಹೋಯಿತು ಮಾಬೂ ?"

"ಈ ಜಗತ್ತು ಇಷ್ಟೆ.....ಯಾವೊಂದೂ, ಹೊಸತು ಎನಿಸಿದಾಗ ಆಸಕ್ತಿ. ಅನಂತರ ಅಗಸ ಗೋಣಿ ಒಗೆದಂತೆ ಎಂಬ ಗಾದೆ ಕೇಳಿಲ್ಲವೇ ?" ನಿರಾಳ ವಾಗಿ ನುಡಿದ ಮಾಬು.

ನೀಲಿ ಕಾರು ಥಳಥಳಿಸುವ ಸೂರ್ಯರಶ್ಮಿಯ ಪ್ರತಿಫಲನದಿಂದ ಥಳ ಥಳ ಹೊಳೆಯುತ್ತ ಸರ್ರನೆ ಹರಿಯುತಿತ್ತು ಅಂಕುಡೊಂಕಿನ ಹಾದಿಯಲ್ಲಿ.

ಬೆಟ್ಟ ಗುಡ್ಡಗಳ ನಗರಿ. ಸಂದಿಗೊಂದಿಗಳಲ್ಲೆಲ್ಲ ಮನೆಗಳು. ವಿಶಿಷ್ಟ ವೇಷ ಭೂಷಣಗಳ ಜನರಾಶಿಯ ಮಧ್ಯೆ ಜೀನ್ಸ್ ಧರಿಸಿದ ಹದಿ ಹರೆಯದ ಹುಡುಗ ಹುಡುಗಿಯರು ತಮ್ಮದೇ ಆದ ಪ್ರಕೃತಿದತ್ತ ಸ್ವರೂಪ. ಸ್ವರ್ಗ

ಸದೃಶವಾದ ಲೋಕದಲ್ಲಿ ಸ್ವಚ್ಛಂದ ವಿಹಾರದಲ್ಲಿರುವ ಸಿಕ್ಕಿಂ ಜನರಾಶಿ. ಅಲ್ಲಲ್ಲಿ ವಿರಳವಾಗಿ ವಿದೇಶೀಯರೂ ಕಂಡುಬರುತ್ತಾರೆ.

ಶ್ಯಾಮಲಾ ಎಲ್ಲವನ್ನೂ ಬಗೆಗಣ್ಣುಗಳಿಂದ ನೋಡುತ್ತ ಆನಂದರಸದ ಮೂಟೆಯಾದಳು. ಹೃದ್ಗಡಲು ಉಕ್ಕೇರಿ ಬಂತು. ನರನಾಡಿಗಳಲ್ಲಿ ಉತ್ಸಾಹದ ಝುರಿ ಜರ್ರನೆ ಹರಿದಾಡಿತು. ಹಕ್ಕಿಯಾಗಿ ಹಾರಾಡುವಂತಿದ್ದರೆ.....? ಹೃದಯ ಹಂಸೆ ಹಾರೈಸಿತು.

"ನೀನಿಲ್ಲಿ ಕೆಲವು ದಿನಗಳಿದ್ದರೆ ಸಿಕ್ಕಿಂ ಜನಜೀವನ ಮತ್ತು ಸಾಂಸ್ಕೃತಿಕ ಜೀವನ ಅರಿತುಕೊಳ್ಳಬಹುದು. ಕೊನೆಯ ಪಕ್ಷ ಮೂರು ತಿಂಗಳಾದರೂ ಇರಬೇಕು."

ಶ್ಯಾಮಲಾ ಮನದಲ್ಲೇ ಯೋಚಿಸಿ ನುಡಿದಳು "ಅಷ್ಟು ಕಾಲ ಇಲ್ಲಿರುದೆಂದರೆ ಇಬ್ಬರೂ ರಜೆ ತೆಗೆದುಕೊಳ್ಳಬೇಕು. ಬಿಡಿ, ಅದು ಸಾಧ್ಯವಿಲ್ಲದ ಮಾತು. ಹೀಗೇ ಯಾವಾಗಲಾದರೂ ಬಂದು ಹೋಗುತ್ತಿದ್ದರೆ ಕ್ರಮ ಕ್ರಮೇಣ ಪರಿಚಯವಾದೀತು."

"ಶ್ಯಾಮೂ ಇಲ್ಲಿ ಕೇಳು. ನಾವು ಬಂದು ಹೋಗುವುದು ರಜೆ ದಿನಗಳಲ್ಲಿ ಮಾತ್ರ, ಇಲ್ಲಿನ ಹಬ್ಬ ಹರಿದಿನಗಳಲ್ಲಿ ಭಾಗವಹಿಸಿದರೆ ಮಾತ್ರ ನಮ್ಮ ಸಾಂಸ್ಕೃತಿಕ ಪರಿಚಯವಾಗುತ್ತೆ. ಇದು ಸಾವಿರದೊಂಭೈನೂರೈವತ್ತೆಂಟರಲ್ಲಿ ಭಾರತದ ಒಕ್ಕೂಟಕ್ಕೆ ಸೇರಿಹೋಯಿತು. ಆಗ ದೊರೆ ಚೋಗ್ಯಾಲ್ ಬದುಕಿದ್ದರು. ನೆಹರೂರವರು ಗಾಂಗ್‌ಟೊಕ್ ನಾಡು ಹೆದ್ದಾರಿಯನ್ನು ಉದ್ಘಾಟಿಸಿದರು. ನಾವು ಪಯಣಿಸುತ್ತಿರುವ ಇದೇ ನಾಥುಲಾ ಹೆದ್ದಾರಿ. ಇಲ್ಲಿ ಪುಟ್ಟಸವಾದ ತಾಣವಿಲ್ಲವಾದುದರಿಂದ ಆಟದ ಮೈದಾನಗಳು ಇಲ್ಲವೇ ಇಲ್ಲ. ಇಲ್ಲಿ ಏಳು ಗಂಟೆಗೇ ಅಂಗಡಿ ಮುಂಗಟ್ಟುಗಳು ಮುಚ್ಚಿಬಿಡುತ್ತವೆ. ಜನ ಸಂಚಾರ-ವಾಹನ ಸಂಚಾರ ಅಂತ್ಯಗೊಳ್ಳುತ್ತವೆ. ಆನಂತರ ಮಕ್ಕಳು ಆಟಕ್ಕಾಗಿ ಬೀದಿಗಿಳಿಯುತ್ತಾರೆ. ಇಂತಹ ಕಠಿಣ ಪ್ರಸಂಗದಲ್ಲೂ ಮಕ್ಕಳು ಆಟದಲ್ಲಿ ಆಸಕ್ತಿ ಉಳಿಸಿಕೊಂಡಿದ್ದಾರೆ. ಅದೇ ವಿಶೇಷ."

ಎದುರುಗಡೆಯಿಂದ ಜೀಪೊಂದು ಸರ್ರನೆ ಬಂದುದರಿಂದ ಗಕ್ಕನೆ ಬ್ರೇಕು ಹಾಕಿದ ಮಾಬು. ಆರಾಮವಾಗಿ ಮಾತಾಡುತ್ತ ಹಗುರವಾಗಿ ಕುಳಿತಿದ್ದ ಶ್ಯಾಮಲೆಯ ತಲೆ ಮುಂದಿನ ಕನ್ನಡಿಗೆ ಡಿಕ್ಕಿ ಹೊಡೆಯಿತು.

"ಹಾ ! ಪೆಟ್ಟಾಯಿತೇ ಶ್ಯಾಮೂ ?"

"ಸಧ್ಯ ಕನ್ನಡಿ ಒಡೆಯಲಿಲ್ಲವಲ್ಲಾ ?"

"ಹಣೆ ಗುಂಡಗೆ ಊದಿಕೊಂಡಿದೆ. ಹಾಗೇ ಸ್ವಲ್ಪ ಉಜ್ಜಿಕೋ. ಸ್ಸಾರಿ ಶ್ಯಾಮ್ !"

"ಪರವಾಯಿಲ್ಲ."

ಎದುರುಬದುರಾದ ಎರಡೂ ವಾಹನಗಳು ಒಂದಕ್ಕೊಂದು ದಾರಿ ಮಾಡಿಕೊಂಡು ಹೊರಟುವು. ಮುಂದೆ ಮುಂದೆ ಪಯಣಿಸಿದಂತೆಲ್ಲಾ ದಟ್ಟ ವಾದ ಗೃಹಗಳ ಶ್ರೇಣಿ; ಇಕ್ಕೆಲಗಳಲ್ಲೂ ಕಂಡುಬರುವ ಸಸ್ಯರಾಜಿಯಲ್ಲಿ ಮುಳುಗಿದ ಅವುಗಳ ಅಂದ ಬಲು ಆಕರ್ಷಣೀಯ. ಕಣ್ಮನಗಳನ್ನು ಸೂರೆ ಗೊಂಬ ಪ್ರಕೃತಿ ಸೌಂದರ್ಯದಲ್ಲಿಯೇ ಮನವಿಟ್ಟದ್ದಳು ಶ್ಯಾಮಲಾ.

"ನಾವು ಸಿಲಿಗುರಿ ಬಿಟ್ಟಾಗ ಆರು ಗಂಟೆ. ಮುಂದಿನ ಕೇವಲ ನೂರ ಹತ್ತು ಮಿಾಟರ್ ಎಷ್ಟು ಸಮಯ ತೆಗೆದುಕೊಂಡಿತು ನೋಡು ! ಪದೇ ಪದೇ ತಿರುವು ಮುರುವು ಸಿಗುವುದರಿಂದ-ಸಣ್ಣ ಸಣ್ಣ ದಾರಿಗಳಿಂದ ಪಯಣ ನಿಧಾನ. ನೇರ ರಸ್ತೆಗಳಾದರೆ ರೊಯ್ ಎಂದು ಹೋಗಿಬಿಡಬಹುದು ! ಆದಕ್ಕೇ ನನಗಿಲ್ಲಿ ಡ್ರೈವಿಂಗ್ ಬೇಸರ ಹಿಡಿಸುತ್ತದೆ."

"ನಾನು ಸ್ಟೇರಿಂಗ್ ಹಿಡಿಯಲೇ ?"

"ಬೇಡ, ನೀನು ಇದೇ ಮೊದಲಾಗಿ ಬರುತಿದ್ದಿ. ಸ್ವಲ್ಪ ಅಭ್ಯಾಸ ವಾಗಲಿ. ಅನಂತರ ಹೇಗೂ ನಿನ್ನದೇ. ರಾಣಿಯವರಿಗೆ ಬೇಡ ಎನ್ನ ಲಾಗುತ್ತದೆಯೇ ?"

ಅವಳು ನಕ್ಕು ನುಡಿದಳು "ನಾನು ಇಲ್ಲಿಯ ಪ್ರಮುಖ ಬೌದ್ಧ ಮಠ ಗಳನ್ನು ಮಣಿಲ್ಹಾನ್‌ಖಾಂಗ್ ದೇಗುಲಗಳನ್ನು ಸಂದರ್ಶಿಸಬೇಕೆಂದಿರುವೆ..... ನಿಜವಾಗಿಯೂ ಈ ಪ್ರದೇಶವೈಭವ ರೋಮಹರ್ಷಕ."

"ನೋಡು ! ನೋಡು ! ಆದಕ್ಕೇನಂತೆ. ಮಣಿಲ್ಹಾನ್‌ಖಾಂಗ್ ದೇಗುಲಗಳೂ ಮಠಗಳೂ ಎಲ್ಲಾ ಕಡೆಯೂ ಇವೆ. ಹೇಗೂ ಒಂದು ವಾರ ಇರುತ್ತೇವಷ್ಟೆ ? ಎಲ್ಲಾ ನೋಡಿದರಾಯಿತು. ಕೆಲವು ಬೌದ್ಧ ಮಂದಿರ ಗಳಲ್ಲಿ ಚಿತ್ತಾಕರ್ಷಕವಾದ ಭಿತ್ತಿ ಚಿತ್ರಗಳಿವೆ. ಟಿಬೆಟ್ ಬೌದ್ಧ ಪಂಥಕ್ಕೆ ಸೇರಿದ ಚಿತ್ರಗಳೂ, ನೇಪಾಳೀ ಬೌದ್ಧ ಮತಕ್ಕೆ ಸೇರಿದ ದೇವತೆಗಳ

ಚಿತ್ರಗಳೂ ಅಪಾರವಾಗಿವೆ. ತುಂಬ ಸಮಯವಿದ್ದರೆ ನೋಡಿ ಆನಂದಿಸ ಬಹುದು. ಕಾಂಚನಗಂಗಾ ಶಿಖರ ಸಿಕ್ಕಿಂ ಜನರ ಅಧಿದೇವತೆ!"

"ನಾವು ಎರಡು ವಾರ ಬಿಡುವು ಮಾಡಿಕೊಂಡಿದ್ದರೆ ಒಳ್ಳೆಯದಿತ್ತು."

"ಅದನ್ನು ಮುಂದಿನ ಸಲಕ್ಕೆ ಯೋಚಿಸಬಹುದು. ಇನ್ನು ಮುಂದೆ ಮುಂದೆ ದಾರಿಯಲ್ಲೇ ನೀನು ಬೇಕಾದಷ್ಟು ಅದ್ಭುತಗಳನ್ನು ನೋಡುವೆ. ಇನ್ನು ನೀನೆಂದಂತೆ ರೋಮ ಹರ್ಷಕವೇ."

"ಏನೇನು ಸಿಗುತ್ತವೆ ?" ಕಿವಿ ನಿಮಿರಿಸಿದಳು ಶ್ಯಾಮಲಾ.

"ಬೌದ್ಧ ವಿಹಾರಗಳ ಪರಿಸರದಲ್ಲಿ ಕಲ್ಲಿನ ಮೇಲೆ ಕೆತ್ತಲ್ಪಟ್ಟ ಪ್ರಾರ್ಥನಾ ಧ್ವಜಗಳು, ಸ್ತೂಪಗಳು, ಮಂತ್ರಗಳು, ಸೂಕ್ತಿಗಳು ಹೀಗೆ ಎಲ್ಲವೂ ಕಾಣಸಿಗುತ್ತವೆ. ಎಷ್ಟು ಬೇಕಾದರೂ ನೋಡಬಹುದು."

ಆ ಪರಿಸರದ ಸೌಂದರ್ಯಸಾರವನ್ನು ಮನದುಂಬಿಕೊಳ್ಳುತ್ತಲೇ ಇದ್ದಾಳೆ ಶ್ಯಾಮಲಾ. ಕಾರು ನಗರಿಯ ಒಳಾಂತರವನ್ನು ಬಳಸಿ ಬಳಸಿ ಮುಂದುವರಿಯುತಿದ್ದಂತೆ ಬೆಟ್ಟದ ಮೇಲಿದ್ದ ಒಂದು ಹಿರಿಯ ಕಟ್ಟಡವನ್ನು ತೋರಿ 'ಅದೇ ಚೋಗ್ಯಾಲ್ ಅರಮನೆ!' ಎಂದ ಮಾಬು.

ಶ್ಯಾಮಲಾ ದೃಷ್ಟಿಯನ್ನು ಅತ್ತ ಹರಿಸಿದಳು. ಕುತೂಹಲತೃಷಿತ ದೃಷ್ಟಿಗೆ ಒಂದೊಂದೂ ಮಾದಕ ಮೋಹನವೇ. ನೈಮನಗಳಿಗೆ ಹಸಿರೂಡಿ ಸುವಂತಹ ಹಸುರು.

"ನಿಮ್ಮ ಮನೆ ಮಠಗಳಿಗಿಂತ ಇಲ್ಲಿನ ಪುಷ್ಪಕೋಟಿ ಮತ್ತು ನೈಸರ್ಗಿಕ ಸೌಂದರ್ಯ ನಯನಾಕರ್ಷಕ. ಓಹ್, ಎಂದಿಗೂ ಸ್ಮರಿಸುವಂತಾದ್ದು."

''ಈ ಪ್ರಾಂತ್ಯ ಪುಣ್ಯವಂತರ ಬೀಡು !''

''ಹೋ !'' ನಕ್ಕುಬಿಟ್ಟಳು ಅವಳು.

ಅವನೂ ತನ್ನ ದನಿಯನ್ನು ಹರಿಸಿ ನುಡಿದ ''ಇದು ಡಾಂಭಿಕತನ ವಲ್ಲ! ಬೌದ್ಧರು ಎಂದ ಮೇಲೆ 'ಪುಣ್ಯವಂತರು' ಎಂದರೆ ತಪ್ಪಾಗು ವುದಿಲ್ಲ.''

ಅವಳು ಸಮ್ಮತಿಸುವಂತೆ ಮುಗುಳು ನಗೆ ಬೀರಿದಳು.

ಅಲ್ಲಿಂದ ಮುಂದೆ ಸ್ವಲ್ಪ ದೂರದಲ್ಲಿದ್ದ ಮಹಡಿ ಮನೆಯ ಮುಂದೆ ಕಾರು ನಿಲ್ಲಿಸಿದ.

ಮೊದಲು ಒಳಗಿದ್ದ ನಾಯಿಗಳು ನುಗ್ಗಿ ಬಂದುವು. ಅನಂತರ ಲೆಪ್ಚಾಗಳು ಹೊರಬಂದು ಯಜಮಾನನನ್ನು ನೋಡಿ ಗೌರವ ಭಾವದಿಂದ ಸೆಲ್ಯೂಟ್ ಮಾಡಿ ಕಾರಿನ ಕದ ತೆಗೆದರು. ಶ್ಯಾಮಲಾ ತನ್ನ ಬ್ಯಾಗನ್ನು ಕೈಕೊಂಡು ಪಾದದ್ವಯಗಳನ್ನು ಜೋಡಿಯಾಗಿ ಅಂಗಳಕ್ಕಿಟ್ಟು ಇಳಿದಳು. ಲೆಪ್ಚಾಗಳು ಮರು ಗಳಿಗೆಯಲ್ಲಿಯೇ ಕಾರಿನಲ್ಲಿದ್ದ ಸಾಮಾನನ್ನೂ ಸೂಟ್ ಕೇಸ್‌ಗಳನ್ನೂ ತೆಗೆದರು. ಮಾಬು ನಾಯಿಗಳ ತಲೆ ತಟ್ಟಿ ಮುದ್ದು ಮಾಡಿದ. ಅವು ಮೈ ಮೇಲೆ ಹತ್ತಿ ಮೂಸಿ ಮುದ್ದು ಮಾಡುವಂತೆ ನೆಕ್ಕಿ ಸಂತಸ ಸೂಸಿದುವು. ಕುಂಯ್ ಕುಂಯ್ ರಾಗ ಬೇರೆ. ಅವುಗಳ ಆನಂದವೇ ಆನಂದ.

ಅನಂತರ ಇಬ್ಬರೂ ಒಳ ಹೋದರು. ವರಾಂಡ ದಾಟಿದರೆ ಮಧ್ಯೆ ಕಾರಿಡಾರು. ಎಡಬಲಗಳಲ್ಲಿ ದಿವಾನಖಾನೆ-ವಾಸದ ಕೊಠಡಿ. ರಾಜ ವೈಭವೋಪೇತವಾದ ಸುಖಾಸನಗಳು. ಒಳಾಂತರದಲ್ಲಿ ಇನ್ನೆರಡು ಕೊಠಡಿಗಳು. ಮೇಲೆ ಮಹಡಿ. ಶೌಚಾಲಯಕ್ಕೆ ಹೋಗಿ ಮುಖಮಜ್ಜನ ಮಾಡಿ ಬಂದ ನಂತರ ಮಾಬು ಮಡದಿಯ ಭುಜದ ಮೇಲೆ ಕೈಯಿಟ್ಟು ತಂದೆ ತಾಯಿಯರ ಚಿತ್ರಪಟಗಳಿದ್ದೆಡೆಗೆ ನಡೆಸಿದ. ಇಬ್ಬರೂ ಕೈಜೋಡಿಸಿ ಮೌನಗಳಿಯಲ್ಲಿ ವಂದನೆ ಸಲ್ಲಿಸಿದರು. ಹಾ! ಶಾಂತಿ ಮಂತ್ರವನ್ನು ಪಠಿಸಿದಂತಹ ಶಾಂತಿ! ಶೀತ ದೇಶದ ಶೈತ್ಯಕ್ಕಿಂತಲೂ ಶೀತಲವಾದ ಶಾಂತಿ! ಇಬ್ಬರೂ ಐದು ನಿಮಿಷ ಅಲ್ಲಿ ಕಳೆದರೇನೋ....ಅನಂತರ ಅಲ್ಲಿಂದ ದಿವಾನ್‌ಖಾನೆಗೆ ಬಂದಾಗ ಬಿಸಿ ಬಿಸಿ ಚಹ ಅಣಿಯಾಗಿತ್ತು.

ಮಾಬು ತಾನೊಂದು ಬಸಿಯನ್ನು ತೆಗೆದುಕೊಂಡು ಮಡದಿಗೊಂದು ನೀಡಿದ.

"ನಾನಿನ್ನು ಹೊರಡುವೆ. ಮೀಟಿಂಗಿಗೆ ಹೊತ್ತಾಯ್ತು!"

'ಆಗಲಿ' ಹುಬ್ಬೇರಿಸಿದಳು ಅವಳು.

ಅಲ್ಲಿನ ಹಿರಿಯ ವ್ಯಕ್ತಿಯನ್ನು ಕುರಿತು 'ಅಮ್ಮಾರನ್ನು ಚೆನ್ನಾಗಿ ನೋಡಿಕೊಳ್ಳಿ. ಇನ್ನೊಂದು ಗಂಟೆಯೊಳಗಾಗಿ ಬಂದುಬಿಡುವೆ!' ಎಂದ

"ಆಗಲಿ ಬುದ್ಧಿ."

ಅವನು ಹೊರಹೊರಟ. ಹಿಂದೆಯೇ ಹೊರಬಂದ ಶ್ಯಾಮಲಾ ಅಚ್ಚರಿಯ ನೋಟ ಬೀರಿದಳು. ಕಾರಣ, ಆಗಲೇ ಕಾರು ಥಳಥಳಿಸುತಿತ್ತು!

"ಇಷ್ಟು ಬೇಗ ತೊಳೆದಾಯ್ತೆ ?"

"ಓಹೋ! ಅದೆಷ್ಟೊತ್ತಿನ ಕೆಲಸ ? ಈಗ ಸುಮಾರಾಗಿ ತೊಳೆದಿರುವೆ. ಸಾಯಂಕಾಲ ಚೆನ್ನಾಗಿ ತೊಳೆದು ಸ್ವಚ್ಛಗೊಳಿಸಿದರಾಯ್ತು."

ಎಂದನಾ ತೋಟದ ಮಾಲಿ.

ಮನೆಯ ಮುಂದಿನ ಉದ್ಯಾನವನ್ನು ನೋಡುತಿದ್ದರೆ ಒಳಹೋಗಲು ಮನಸ್ಸೇ ಬಾರದಂತಹ ಮನಮೋಹಕ. ವರ್ಣವರ್ಣಾಂತ ಸುಂದರ ಕುಸುಮ ಲೋಕ.

ಮಾಬು ಕಾರ್ ಸ್ಟಾರ್ಟ್ ಮಾಡಿ ಕೈಯೆತ್ತಿ ಎಲ್ಲರಿಗೂ 'ಟಾಟಾ' ಮಾಡಿ ಹೊರಟ. ಕಾರು ಸ್ವಲ್ಪ ಹೊತ್ತಿನಲ್ಲೇ ಮಾಯವಾಯಿತು. ಶ್ಯಾಮಲಾ ಸುತ್ತಮುತ್ತಿನ ಗುಡ್ಡಬೆಟ್ಟಗಳ ಅಗಾಧವಾದ ಶ್ರೇಣಿಯನ್ನೂ, ಪಶ್ಚಿಮಾರ್ಧಿಯ ನೆಲೆಯಲ್ಲಿ ಶೋಭಿಸುವ ಚ್ಯೋಗ್ಯಾಲ್ ಅರಮನೆಯನ್ನೂ ನೋಡಿದಳು. ಅಲ್ಲಿಗೂ ಇಲ್ಲಿಗೂ ಬಹಳ ದೂರವೇನಿಲ್ಲ. ಒಂದೆರಡು ಫರ್ಲಾಂಗ್ ಅಂತರದೊಳಗೇ ಇರಬಹುದು.

ಸುತ್ತ ಮುತ್ತ ಓಡಾಡುವ ಜನರಾಶಿಯಲ್ಲಿ ದೇಶೀಯ ವಿಶಿಷ್ಟ ಉಡುಪಿನ ಜನರೇ ಹೆಚ್ಚು. ನಾಗರಿಕ ಉಡುಪಿನಲ್ಲಿ ಕೆಲವರು, ಭಾರತೀಯ ಉಡುಪಿನಲ್ಲಿ ಕೆಲವರು ಕಂಡುಬಂದರು.

ಮನೆಯ ಕೇರ್ ಟೇಕರ್ ತಾತ ಅಂದ "ಟಿಬೆಟ್ಟಿನ ಜನ ಇದನ್ನು 'ಡೆನ್ ಜೋಂಗ್' ಎಂದರೆ 'ಅಕ್ಕಿಯ ನೆಲ' ಎಂದು ಸಂಭ್ರಮದಿಂದ ಕರೆಯುತ್ತಾರೆ ಲೆಪ್ಚಾಗಳು 'ನೈ-ಮ ಎಲ್-ಎಲ್' ಎಂದರೆ ಸ್ವರ್ಗ ಎಂದು ಕರೆಯುತ್ತಾರೆ. ಬೌದ್ಧರಿಗಿದು 'ಶಾಂತಿಯ ಸ್ವರೂಪ ಅಮ್ಮಾವರೇ!"

"ಹೌದು! ಪ್ರತಿಯೊಂದು ನಾಮವೂ ಅನ್ವಯವಾಗುವಂತಹ ಸುಂದರ ಪ್ರದೇಶವೇ ಎಂದರೆ ತಪ್ಪಲ್ಲ."

ತಲೆಯೆತ್ತಿ ಮನೆಯ ಕಡೆ ನೋಡಿದಳು. ನೂರು ವರ್ಷಗಳಷ್ಟು ಹಳೆಯದಾದರೂ ಅಚ್ಚಳಿಯದೇ ನಿಂತ ಸುಂದರ ಸುಭದ್ರ ಕಟ್ಟಡ.

"ಜೊಗ್ಯಾಲ್ ಅರಮನೆ ದರ್ಶಿನಿ" ಎಂಬ ಹಣೆ ಪಟ್ಟಿಯನ್ನು ಹಚ್ಚಿಕೊಂಡಿತ್ತು. ಅತ್ಯಂತ ಆಧುನಿಕ ವೈಭವದಲ್ಲಿ.

"ಅಮ್ಮಾ! ಈ ಮನೆಗೆ ಮೊದಲು ಹೆಸರಿದ್ದುದು 'ಅರಮನೆ ದರ್ಶಿನಿ' ಎಂದು ಮಾತ್ರ. ಮಾಬೂ ದೊಡ್ಡವನಾದ ಮೇಲೆ ಜೋಗ್ಯಾಲ್ ಹೆಸರು ಸೇರಿಸಿದ. ದೊರೆಯ ಹೆಸರು ಚಿರವಾಗಿರಲಿ ಎಂದು ಈ ಮನೆತನಕ್ಕೆ ಇವನು ಒಬ್ಬನೇ ಮಗ. ತುಂಬಾ ಬುದ್ಧಿವಂತ. ಚಿಕ್ಕಂದಿನಲ್ಲೂ ಅಷ್ಟೇ. ಯಾವ ತಂಟೆ ಮಾಡಿದವನಲ್ಲ. ದೇವತಾ ಪುರುಷ! ಅಪ್ಪ-ಅಮ್ಮನನ್ನು ಚೆನ್ನಾಗಿ ನೋಡಿಕೊಂಡ. ನಮ್ಮೆಲ್ಲರಿಗೂ ಬಂಧುವಾಗಿ-ತಂದೆಯಾಗಿ ಇದ್ದಾನೆ. ಪೂರ್ವಾರ್ಜಿತ ಆಸ್ತಿ ಅಲ್ಪಸ್ವಲ್ಪ ಇದೆ. ಇವನು ಊರು ಬಿಟ್ಟಾಗ ಸ್ನೇಹಿತರಾರೋ ಈ ಆಸ್ತಿ-ಮನೆ ಮಾರಿಬಿಡಲು ಸಲಹೆ ಇತ್ತಿದ್ದರು. ಈ ದೇವತಾ ಪುರುಷ ಮನಸ್ಸಿಗೆ ಹಾಕಿಕೊಳ್ಳದೆ ಅದನ್ನು ಬಡವರಾದ ನಮಗೇ ಬಿಟ್ಟಿದ್ದಾನೆ. ನಾವು ಉತ್ತಿ ಬಿತ್ತಿ ನಮ್ಮ ಹೊಟ್ಟೆ ಹೊರೆದುಕೊಂಡು ಈ ಮನೆ ಮತ್ತು ಸಕಲ ವಸ್ತುಗಳನ್ನೂ ನೋಡಿಕೊಂಡು ಇಲ್ಲಿ ಸುಖವಾಗಿದ್ದೇವೆ. ಇಂತಹವರು ನೂರಕ್ಕೊಬ್ಬರೂ ಸಿಗುವುದಿಲ್ಲ! ಊರು ಬಿಟ್ಟರೂ ಆಗಾಗ ಬರುತ್ತಾನೆ ಮಾಬು."

ಶ್ಯಾಮಲಾ ಪ್ರಸನ್ನ ಮುಖಿಯಾಗಿ ತಲೆದೂಗಿದಳು.

"ಬನ್ನಿ ಅಮ್ಮಾ! ಹೊರಗೆ ನಿಂತುಬಿಟ್ಟಿರಿ."

ಶ್ಯಾಮಲಾ ಒಳಬಂದಳು. ಗೋಡೆಯ ಮೇಲೆ ಮಾಬೂ ತಂದೆ ತಾಯಿಯರ ಭವ್ಯ ಚಿತ್ರಗಳು. ಕೆಳಗಡೆ ಮೇಜಿನ ಮೇಲೆ ಹೂವು ಹಣ್ಣುಗಳ ನೈವೇದ್ಯ. ಎರಡೂ ಕಡೆ ದೊಡ್ಡ ದೊಡ್ಡ ಮೋಂಬತ್ತಿಯ ದೀಪಗಳು ಉರಿದಿದ್ದುವು ದೀಪದಾನಿಯಲ್ಲಿ. ಆಂಟಿಕ್ ಎನಿಸಿಕೊಳ್ಳುವಂತಹ ಆಲಂಕರಣ ವಸ್ತುಗಳು. ರೇಶಿಮೆಯ ಪರದೆಗಳು, ಕರಕುಶಲ ವಸ್ತುಗಳು, ಎತ್ತರದ ನಿಲುವುಗನ್ನಡಿಗಳು; ಒಳ ಕೋಣೆಯನ್ನು ಹೊಕ್ಕಾಗ ದೇಶೀಯ ವಿಶಿಷ್ಟ ಉಡಿಗೆ ತೊಟ್ಟ ಬಂಧು ಬಾಂಧವರ ಚಿತ್ರಗಳು ಮತ್ತು ಎದುರು ಗೋಡೆಯ ಮೇಲೆ ಮಾಬು-ವಿನ ನೆಚ್ಚಿನ ಮೊದಲ ಮಡದಿ ಭವೇಲಿಯ ಸುಂದರ ತೈಲ ಚಿತ್ರ ಬೆಳ್ಳಿಯ ಚೌಕಟ್ಟಿನಲ್ಲಿ ರಾಜಿಸುತ್ತಿದೆ. ಭವೇಲಿ ದೇಶೀಯ ಉಡಿಗೆಯಲ್ಲಿ ಮತ್ತು ನಾಗರಿಕ ಉಡಿಗೆಯಲ್ಲಿ ಮತ್ತು ವಿವಿಧ ಭಂಗಿಗಳಲ್ಲಿ ಕಂಡುಬಂದಳು. ಕೇರ್ ಟೇಕರ್ ತಾತ ಅಂದ, "ಭವೇಲಿ

ಮಾಬೂಗೆ ಸರಿಯಾದ ಮಡದಿ. ಭಗವಂತ ಅವಳಿಗೆ ಆಯುಸ್ಸು ಕೊಡಲಿಲ್ಲ!"

"ಪಾಪ.....! ಈ ಚಿತ್ರಗಳನ್ನೆಲ್ಲಾ ನಾನು ಮಾಬು ಆಲ್ಬಮ್ಮಿನಲ್ಲಿ ನೋಡಿರುವೆ."

"ಮೇಮ್‌ಸಾಬ್ ಬಹಳ ಅಚ್ಚುಕಟ್ಟು. ಬಹಳ ಬುದ್ಧಿವಂತೆ-ಚತುರೆ-ಅತ್ತೆ ಮಾವಂದಿರಿಗೂ ಅಚ್ಚುಮೆಚ್ಚು. ಮೂವರೂ ಹೆಚ್ಚು ಕಡಿಮೆ ಒಂದೂವರೆ ವರ್ಷದಲ್ಲಿ ತೀರಿಕೊಂಡರು! ಅದೊಂದು ದುರಾದೃಷ್ಟ. ಎಲ್ಲರನ್ನೂ ಕಣ್ಣೀರಿನ ಕಡಲಲ್ಲಿ ಮುಳುಗಿಸಿತು, ದುರ್ವಿಧಿ. ಅನಂತರ ಮಾಬೂ ಈ ಊರು ಬಿಟ್ಟುಬಿಟ್ಟ." ಮಾತಿನ ಹಿಂದೆಯೇ ನಿಟ್ಟುಸಿರು ಬಿಟ್ಟ ತಾತ.

ಶ್ಯಾಮಲಳಿಗೂ "ಅಯ್ಯೋ" ಎನಿಸಿ ಕರುಣೆಯ ಕಟ್ಟೆ ಒಡೆಯಿತು.

ಅನಂತರ ಮಹಡಿ ಹತ್ತಿದಳು ಶ್ಯಾಮಲಾ. ಅಲ್ಲಿಯೂ ಸಹ ವೈಭವೋಪೇತ ಸುಖ ಸುಪ್ಪತ್ತಿಗೆಗಳು. ಸಂಸಾರಸ್ಥರು ಇದ್ದಂತೆಯೇ ಎಲ್ಲ ಸ್ವಚ್ಛಶೃಂಗಾರಮಯ. ಮಾಸಿಲ್ಲ; ಮುದುಡಿಲ್ಲ. ತಾತನ ಬಗ್ಗೆ ಗೌರವ ಮೂಡಿತು. ಒಳಗೆಲ್ಲಾ ಸುತ್ತಾಡಿದ ನಂತರ ಬಿಸಿಲು ಮಚ್ಚಿಗೆ ಹೋದರು. ಅಲ್ಲಿಂದ ಚೊಗ್ಯಾಲ್ ಅರಮನೆಯ ನೋಟ ಸುಂದರ. ದೈವ ನಿರ್ಮಿತ ನಿಸರ್ಗದ ಉಡಿಯಲ್ಲಿ ಮಾನವ ನಿರ್ಮಿತ ಪ್ರಸಾದನ. ಆ ದೃಶ್ಯ ಮಾನ ಸೌಂದರ್ಯ ಮನವನ್ನು ಸೂಜಿಗಲ್ಲಿನಂತೆ ಸೆಳೆಯಿತು. ಆ ದೇಶ, ಆ ಜನ, ಆ ನಿಸರ್ಗ ಸೌಂದರ್ಯ ಎಲ್ಲವೂ ರಸದೃಷ್ಟಿಗೆ ಆಪ್ಯಾಯಮಾನ.

"ಅಮ್ಮಾ! ನೋಡು, ಆ ಬೆಟ್ಟದ ತಪ್ಪಲಿನಲ್ಲಿ ಲಾಚೆನ್ ನದಿ ಭೋರ್ಗರೆಯುತ್ತ ಎರಡು ಬೆಟ್ಟಗಳ ಇಕ್ಕಟ್ಟಿನಲ್ಲಿ ಹರಿಯುತ್ತದೆ. ಈ ಕಡೆ ನೋಡು. ಓ ಅಲ್ಲಿ, ಮಂಜು ಮುಸುಗಿದಂತೆ ಕಾಣುವುದೇ ರಣಜಿತ್ ನದಿ. ರಾಜ್ಯ ಪುಟ್ಟದಾದರೂ ನಾವು ಹೊಂದಿರುವ ಸೌಕರ್ಯ ಅಗಾಧ. ನಮಗೆ ಸಮತಟ್ಟಾದ ನೆಲವಿಲ್ಲ ಎಂಬುದೊಂದು ಕೊರತೆ. ವಿಮಾನ ನಿಲ್ದಾಣಕ್ಕೆ, ಆಟದ ಮೈದಾನಗಳಿಗೆ, ರೈಲುದಾರಿಗೆ ಅಡಚಣೆ. ಅದಷ್ಟು ಬಿಟ್ಟರೆ ನಾವು ಪುಣ್ಯವಂತರು. ದೇವರು ನಮಗೆ ಆಯುರಾರೋಗ್ಯ ಕೊಡಬೇಕು ಅಷ್ಟೆ."

"ನಾನು ಅದಕ್ಕಾಗಿ ಪ್ರಾರ್ಥಿಸಿಕೊಳ್ಳುವೆ."

"ವಂದನೆಗಳು!"

"ಬಾ, ಕೆಳಗೆ ಹೋಗೋಣ, ಇಲ್ಲಿ ತುಂಬ ತಂಡಿ ಹವೆ."

"ಇಬ್ಬರೂ ಕೆಳಗಡೆ ಬಂದರು. ಶ್ಯಾಮಲಾ ಹಿಂದೆ ಮುಂದೆ ಎಲ್ಲಾ ಕಡೆ ಓಡಾಡಿ ನೋಡಿದಳು. ಅಡಿಗೆ ಮನೆ, ಉಗ್ರಾಣ ಮೊದಲ್ಗೊಂಡು ವಸ್ತು ವಸ್ತುವೂ ಹೇಗಿದ್ದುವೋ ಹಾಗೆಯೇ ಇವೆ. ಯಾವೊಂದು ವಸ್ತುವೂ ಸ್ಥಳಪಲ್ಲಟವಾಗಿಲ್ಲ. ಎಲ್ಲವೂ ದಿನಬಳಕೆಯ ವಸ್ತುಗಳಂತೆ ಸ್ವಚ್ಛ-ಸುಂದರ. ಎಂತಹ ಮೂರ್ಖನೂ ಖಾಲಿಮನೆ ಎಂದರೆ ಖಂಡಿತ ಒಪ್ಪಿಕೊಳ್ಳಲಾರ. ಶ್ಯಾಮಲಾ ಅಚ್ಚರಿಯ ಕುಂಡದಲ್ಲಿ ಮುಳುಗೆದ್ದಳು. ಮನಸ್ಸು ಗತಕಾಲ ದಲ್ಲಿ ಅಂಡಲೆಯಿತು. ಹಾಗೇ ಒಳ ಬಂದು ಸುಪ್ಪತ್ತಿಗೆಯ ಮೇಲೆ ಅಡ್ಡಾಗಿ ಕೈಗೆ ಪುಸ್ತಕ ತೆಗೆದುಕೊಂಡಳು. ಅರ್ಧಶಯನಾವಸ್ಥೆಯಲ್ಲಿ ಮಲಗಿ ಕೊಳ್ಳಲು ಸೋಫದ ಮೇಲಿದ್ದ ಎರಡು ದಿಂಬುಗಳನ್ನು ತೆಗೆದುಕೊಂಡಾಗಲೇ ಒಳಬಂದ ತಾತ ಹೇಳಿದ "ಅಮ್ಮಾ! ಭವೇಲಿ ಅಮ್ಮನಿಗೆ ಕಿಂಚಿತ್ತು ವಸ್ತು ಗಳು ಅತ್ತಿತ್ತ ಕದಲಬಾರದು. ನಿಮಗೆ ಬೇರೆ ದಿಂಬು ತಂದು ಕೊಡುವೆ."

ಒಳ ಹೋಗಿ ಕೆಲವೇ ನಿಮಿಷಗಳ ಒಳಗಾಗಿ ಎರಡು ದಿಂಬುಗಳ ಸಹಿತ ಬಂದು ಮೊದಲಿನ ದಿಂಬುಗಳನ್ನು ಅಲ್ಲಲ್ಲೇ ಸ್ಥಳೀಕರಿಸಿ ಅಂದ "ಭವೇಲಿ ಅಮ್ಮನ ನಿಯಮ ಹಾಗಿತ್ತು."

ಶ್ಯಾಮಲಾ ಹುಬ್ಬೇರಿಸಿ ಸಣ್ಣ ಅಚ್ಚರಿ ಸೂಸಿದಳು.

"ನೀನು ಇಲ್ಲಿಯ ಮಹಾತ್ಮಾ ಗಾಂಧಿಯ ಲಾಲ್ ಮಾರ್ಕೆಟ್ ಕಡೆ ಹೋದರೆ ನಮ್ಮ ಹೆಣ್ಣುಮಕ್ಕಳ ಚಟುವಟಿಕೆ ತಿಳಿಯುತ್ತದೆ. ಜೀನ್ ಉಡುಪು ತೊಟ್ಟು ಸಣ್ಣ ಸಣ್ಣ ವ್ಯಾಪಾರ ಮಾಡಿ ತಮ್ಮ ವಿದ್ಯಾಭ್ಯಾಸಕ್ಕೆ ಹಣ ಗಳಿಸಿಕೊಳ್ಳುತ್ತಾರೆ. ಬೆಳಗ್ಗೆ ಶಾಲೆ, ಕಾಲೇಜು. ಸಂಜೆ ವ್ಯಾಪಾರ!"

"ಪರವಾಯಿಲ್ಲ."

"ನೀನು ಹಿಂದೂ ನೇಪಾಳಿಗಳ ದಸೈನ್ ನೃತ್ಯೋತ್ಸವ ನೋಡ ಬೇಕು. ದಸೈನ್ ಮುಗಿದ ನಂತರ 'ತೈಹಾರ್' ಪ್ರಾರಂಭವಾಗುತ್ತದೆ. ಜನಗಳ ಗುಂಪು ಮನೆಮನೆಗಳಿಗೆ ತೆರಳಿ 'ಬೈಲೊ' ಹಾಡುಗಳನ್ನು ಹಾಡು ತ್ತಾರೆ. ಇವೆಲ್ಲಾ ಸಾಂಸ್ಕೃತಿಕ ಕಾರ್ಯಕ್ರಮವಾದುದರಿಂದ ಕಂಪು ಸೊಂಪುಗಳಿಂದ ತುಂಬಿ ಆಕರ್ಷಣೀಯವಾಗಿರುತ್ತದೆ.

"ಬೌದ್ಧರು ಪಾಂಗ್ ಲಾಬ್ಸೋಲ್ ಮತ್ತು ಕಗ್ಯತ್ ಚಾಮ್ಸ್ ಹಬ್ಬಗಳನ್ನು ಸಂಭ್ರಮದಿಂದ ಆಚರಿಸುತ್ತಾರೆ. ರಂಗುರಂಗಿನ ಉಡುಪು ತೊಟ್ಟು ಮುಖವಾಡ ಧರಿಸುವುದರಿಂದ ಎಲ್ಲವೂ ಮನಮೋಹಕ, ನೀನು ಒಳ್ಳೆಯ ಸಮಯಕ್ಕೆ ಬಂದಿದ್ದಿ. ಎಲ್ಲವನ್ನೂ ನೋಡಿಕೊಂಡೇ ಹೋಗಮ್ಮಾ." ಎದೆಯಾಳದಿಂದ ಹರಿದು ಬಂತು ತಾತನ ದನಿ.

ಮುಂಬಾಗಿಲಿಗೆ ಕಾರು ಬಂದು ನಿಂತ ಸದ್ದು.

ಶ್ಯಾಮಲಾ ಹೊರಬಂದಳು. ಆಳುಗಳು ಎದುರುಗಡೆ ಹಾಜರಾದರು. ಮಾಬು ನಗುತ್ತ ಕೇಳಿದ "ಒಬ್ಬಳೇ ಇದ್ದು ಬೇಸರವಾಯಿತೇ ರಾಣಿ?"

"My goodness! ಇಲ್ಲಪ್ಪಾ! ಬಹಳ ಸರಾಗವಾಗಿ ಕಳೆಯಿತು. ಹೊತ್ತು. ತಾತನ ಬನ್ನಣೆ ಇದುವರೆವಿಗೂ ನಡೆಯಿತು. ನಾನು ಕೇಳಿ ಕೇಳಿ ಸಂತೋಷಪಟ್ಟೆ."

ಅನಂತರ ಊಟ-ತಾತನ ಸಂಸಾರ ಸಿಕ್ಕಿಂ-ಖಾದ್ಯಗಳನ್ನು ತಯಾರಿಸಿ ತಂದಿದ್ದರು. ತಾತ ಎಲ್ಲರನ್ನೂ ಪರಿಚಯ ಮಾಡಿಕೊಟ್ಟ. ಸರಳ ಊಟ ಹಿತವಾಗಿತ್ತು. ಮಧ್ಯಾಹ್ನದ ಅಲ್ಪ ವಿರಾಮದ ನಂತರ ಸಂಜೆಯಲ್ಲಿ ಬೌದ್ಧ ವಿಹಾರಗಳತ್ತ ಇಬ್ಬರೂ ಹೊರಟರು.

ದಿನವೂ ಒಂದಲ್ಲ ಒಂದು ಹೊತ್ತು ಮೀಟಿಂಗ್. ಅನಂತರ ನಗರ ವಿಹಾರ.

ಮಾಬು ಹೊರ ಹೋದಾಗ ಮನೆಯ ಶೃಂಗಾರದಲ್ಲಿ ಮನವಿಟ್ಟಳು ಶ್ಯಾಮಲಾ. ಹೂದಾನಿಯಲ್ಲಿ ವರ್ಣವರ್ಣಾಂತ ಹೂಗಳನ್ನು ಹೊಂದಿಸಿ ಮಧ್ಯೆ ಮೇಜಿನ ಮೇಲಿಟ್ಟಳು.

ಆಗ ತಾತ ಅಂದ "ಭವೇಲಿಗೆ ಹೂದಾನಿ ಇಲ್ಲಿರುವುದು ಸರ್ವಥಾ ಇಷ್ಟವಿಲ್ಲ. ನೋಡು, ಈ ಚೆಸ್ಟಿನ ಮೇಲಿಡುವುದೇ ಅವಳಿಗೆ ಇಷ್ಟವಾದುದು. ನೀನೂ ಅಲ್ಲಿಯೇ ಇಟ್ಟುಬಿಡು! ಅದು ಅವಳಿಗೆ ಪ್ರೀತಿಯಾಗುತ್ತೆ."

ಶ್ಯಾಮಲಾ ಒಂದುಗಳಿಗೆ ಯೋಚಿಸಿ ಅಲ್ಲಿಯೇ ಇಟ್ಟಳು. ನೋಡಿದರೆ, ಅದೇ ಸೂಕ್ತವಾದ ಸ್ಥಳ ಎನಿಸಿತು ಕೊನೆಗೆ. ಕೆಲವು ಕರಕುಶಲ ವಸ್ತುಗಳನ್ನು ಒರಿಸಿ ಉಜ್ಜಿ ಶುಚಿಗೊಳಿಸುತ್ತ ಹೇಳಿದಳು ಶ್ಯಾಮಲಾ

"ನನಗೂ ತೋಟಗಾರಿಕೆಯಲ್ಲಿ, ಮನೆ ಅಲಂಕರಣದಲ್ಲಿ ತುಂಬಾ ಆಸ್ಥೆ. ನಾನು ಆಫೀಸಿನಲ್ಲಿ ಕೆಲಸ ಮಾಡುವುದರಿಂದ ಇದಕ್ಕೆಲ್ಲಾ ಬಿಡುವೇ ದೊರೆಯುವುದಿಲ್ಲ. ಇಲ್ಲಿ ನಾನೀಗ ಕೈತುಂಬಾ ಮಾಡಬಹುದು. ಕೈಗೂ ಕೆಲಸ. ಮನಸ್ಸಿಗೂ ಹಿತ."

"ಮಾಡು ಮಾಡು. ನಿನ್ನ ಬೇಸರವೂ ಹರಿಯಲಿ. ಕೆಲಸವಿಲ್ಲದೆ ಕುಳಿತಿರುವುದು ಯಾರಿಗಾದರೂ ಕಷ್ಟವೇ. ನಿನ್ನ ಮನೆ ನೀನು ಮಾಡುವುದೇ ಸರಿ."

"ಊಟ ಹೇಗೂ ನಿಮ್ಮ ಮನೆಯಿಂದ ಬರುತ್ತದೆ. ಅಡಿಗೆಯ ಗೋಜಿಲ್ಲ. ಇದನ್ನಾದರೂ ಮಾಡುವೆ.... ಮನೆ ಅಲಂಕರಣ ಎಷ್ಟು ಮಾಡಿದರೂ ಇರುತ್ತೆ ಬಿಡಿ."

ಶ್ಯಾಮಲಾ ಬಟ್ಟೆ ತೆಗೆದುಕೊಂಡು ಮೇಜಿನ ಮೇಲೆ ಬೀರುವಿನ ಮೇಲೆ ಧೂಳು ಝಾಡಿಸುವ ಕೆಲಸ ಕೈಕೊಂಡಳು. ಅದರ ನಂತರ ಪುಸ್ತಕಗಳನ್ನು ಒರಸಿ ಜೋಡಿಸಿದಳು. ಎಲ್ಲಾ ಕೆಲಸ ಮುಗಿಯಿತು. ಏನೋ ಒಂದು ವಿಶಿಷ್ಟ ರೀತಿಯಲ್ಲಿಯೇ ಜೋಡಿಸಲಾಗಿದೆ ಎಂಬುದರಲ್ಲಿ ಸಂಬುಗೆ ಮೂಡಿತು. ತಾತ ಅಲ್ಲಿಯೇ ಇದ್ದು ಎಲ್ಲಾ ರೀತಿಯಲ್ಲೂ ನೆರವಾಗುತ್ತ "ಇದು ಹೀಗಿರಲಿ" ಎಂಬ ಸಲಹೆ ಕೊಡುತಿದ್ದ.

ಶ್ಯಾಮಲಾ ಅಚ್ಚರಿಯ ಬೀಡಾದಳು. ಮನೆಯ ವಸ್ತುವಸ್ತುಗಳೂ ಚೆನ್ನಗೆ ಬೀರಿದುವು.

ಆ ಮನೆ, ಆ ಆಳುಕಾಳುಗಳು ಮನೆ ಒಡತಿ ಸತ್ತು ವರ್ಷ ಹತ್ತಾದರೂ ಇಟ್ಟುಕೊಂಡಿರುವ ಗೌರವ-ಭಯ-ಭಕ್ತಿಗಳು ಅಸಾಮಾನ್ಯ ಎಂಬುದು ಮನೋಗತ ಮಾತ್ರವಲ್ಲ ; ಆತ್ಮಗತವೂ ಕೂಡ. ಎಂಟು ಹತ್ತು ದಿನಗಳು ಹೇಗೆ ಕಳೆದುವೋ ತಿಳಿಯಲಿಲ್ಲ. ಕೊನೆಗೊಮ್ಮೆ ಹೊರಡುವ ಗಳಿಗೆಯೂ ಬಳಿಸಾರಿ ಬಂತು. ಆಗ ನಿಜವಾಗಿಯೂ ಶ್ಯಾಮಲೆಯ ಕಣ್ಣುಗಳು ತುಂಬಿ ಬಂದುವು. ಅವಳ ಕರುಳ ಕರುಣ ಕಾತರತೆಯ ಮುಗ್ಧ ಭಾವಕ್ಕೆ ಎಲ್ಲರ ಹೃದಯಗಳೂ ಸ್ಪಂದಿಸಿದುವು. ಎಲ್ಲರ ಕಣ್ಣುಗಳು ಕಣ್ಣೀರಿನಿಂದ ತೊಯ್ದುವು.

ಮಾಬು ಕೈಕಾಲು ಮುಖ ಮಜ್ಜನ ಮಾಡಿ ಬಂದು ಮಡದಿಯೊಡನೆ ತಂದೆ ತಾಯಿಯರ ಮತ್ತು ಮಡದಿಯ ಚಿತ್ರಗಳ ಬಳಿ ತಲೆಬಾಗಿ ನಿಂತು ಪ್ರಾರ್ಥನೆ ಸಲ್ಲಿಸಿದ. ಆ ಚಿತ್ರವಾಸಿನಿ ಮಡದಿ ಯಾವುದೋ ಅನನ್ಯ ಲೋಕಕ್ಕೆ ಸಂದೇಶ ಒಯ್ದಿದ್ದು ಇದೀಗ ಹೊರಬಂದಾಳು ಎಂಬಷ್ಟು ಜೀವಂತ–ಜ್ವಲಂತ ಕಳೆ ಮುಖದಲ್ಲಿದ್ದ ಮಾನಿನಿ.

ಶ್ಯಾಮಲೆಯ ಎದೆಯಾಳದಿಂದ ನಿಟ್ಟುಸಿರೊಂದು ಹೊರಹೊಮ್ಮಿತು. ತಾನೂ ನಮ್ರತೆಯ ಪ್ರಣಾಮ ಸಲ್ಲಿಸಿದಳು. ಕಣ್ಣುಗಳಲ್ಲಿ ಸಣ್ಣಗೆ ಬೆಳ್ಳಿಯ ಗೆರೆಯಂತೆ ನೀರಾಡಿತು.

ಜೂಲುನಾಯಿಗಳು ಆಗಲೇ ಕಾರಿನ ಸುತ್ತ ಸುತ್ತಾಡಿ ಮೈಮೇಲೆ ಜಿಗಿದು ಮೂಸಿ ಪ್ರೀತಿಯನ್ನು ವ್ಯಕ್ತಪಡಿಸುತ್ತಿವೆ. ಅವುಗಳ ಸಂಕಟ ಮತ್ತು ತಮ್ಮವರ ಅಗಲಿಕೆಯ ಸಂಕಟ ಎದೆಯಾಳಕ್ಕೆ ಇಳಿಯಿತು. ಮಾಬು ಸಂಕಟದ ಪಾಲಾದರೂ ಧೈರ್ಯವನ್ನು ಪ್ರಕಟಿಸಿ ಎಲ್ಲರಿಗೂ ಹಣ ವನ್ನು ಹಂಚಿದ ನಂತರ ತಾತನ ಎರಡೂ ಕೈಗಳನ್ನು ಹಿಡಿದು ಅದುಮಿ ನಲ್ಮೆಯಿಂದ ವಿದಾಯ ಹೇಳಿದ. ಎರಡು ತಲೆಮಾರಿನ ಆ ಮನೆಯ ವಿನ್ಯಾಸ ರೂಪುರೇಖೆಗಳ ಮೇಲೆ ನನ್ನ ದೃಷ್ಟಿ ಭ್ರಮರದಂತೆ ಹರಿದಾಡಿತು. ಕೊನೆಯ ದಾಗಿ ನಾಯಿಗಳನ್ನು ಮುದ್ದಿಸಿ ತಲೆತಟ್ಟಿ ಕಾರು ಹತ್ತಿ ಸ್ಟೇರಿಂಗ್ ಹಿಡಿದ. ಶ್ಯಾಮಲಾ ಬಳಿಯಲ್ಲಿ ಕುಳಿತಳು. ಇಬ್ಬರೂ ಎಲ್ಲರಿಗೂ ಟಾಟಾ ಹೇಳಿದರೆ, ಆರೇಳು ಮಂದಿಯೂ ಕಂಬನಿ ಸುರಿಸುತ್ತಲೇ ಪ್ರತಿಯಾಗಿ ಟಾಟಾ ಹೇಳಿದರು.

ಕ್ಯಾಡಿಲಾಕ್ ಕಾರು ಹೊರಟಿತು.

ಚೊಗ್ಯಾಲ್ ಅರಮನೆ ದರ್ಶಿನಿ ಬೀಳ್ಕೊಟ್ಟಿತು.

ಸ್ವಲ್ಪದೂರ ಪಯಣ ಸಾಗುವವರೆಗೆ ಇಬ್ಬರ ತುಟಿಗಳೂ ಬಿರಿಯಲಿಲ್ಲ. ಕರುಣಾಯಿತ ಹೃದಯಗಳು ಮೌನ ಸಂಭಾಷಣೆ ನಡೆಸಿದುವು.



# ಸುಧಾಮಣಿ

### ಚಿತಾಯಾಶ್ಚ ಚಿಂತಾಯಾಶ್ಚ ಬಿಂದು ಮಾತ್ರಂ ವಿಶಿಷ್ಯತೆ

ಹ....ನ್ನೆ....ರ....ಡು !

O, my God ! ಹನ್ನೆರಡನೆ ವರ್ಷ ಕಾಲಿಡುತ್ತಿದೆ! ಮುಂದೇನುಗತಿ?

ನಂದಿನಿಗೆ ಒಡಲೆಲ್ಲ ಸಂಕಟ.... ಭಗವಂತ ಮಗಳನ್ನೂ ಕೊಟ್ಟ. ದುಃಖವನ್ನೂ ಕೊಟ್ಟ. ನಾನು ಬಂಜೆಯಾಗಿದ್ದಿದ್ದರೂ ದುಃಖವಿರಲಿಲ್ಲ.... ಒಡಲ ಬಳ್ಳಿಯ ನರನರಗಳೂ ಅಳಲಿದುವು. ಎದೆಯ ಹಕ್ಕಿ ವೀತರಾಗ ದಿಂದ ಗೋಳಿಟ್ಟಿತು. ಚಿಂತಾ ಪರವಶವಾಯಿತು ಮನಸ್ಸು.

ಮೇಜಿನ ಮೇಲೆ ದೊಡ್ಡದೊಂದು ಕೇಕು. Happy Birthday to you Sudhamani. ಅಕ್ಷರ ಮಾಲೆ ಅದರ ಮೇಲೆ. ಚಾಕಲೆಟ್‌ಗಳು ವಿವಿಧ ತಿಂಡಿ ತಿನಿಸುಗಳು ಬೆಲೂನ್‌ಗಳು ಸಂಗ್ರಹೀತವಾದ ಮೇಜು.

ಸುಧಾಮಣಿ ಇನ್ನೂ ಎದ್ದಿಲ್ಲ. ಆಗಲೇ ಹುಟ್ಟು ಹಬ್ಬದ ಸಡಗರ,

ಆದರೆ....! ಮಾತೃಹೃದಯದ ದುಃಖಪೂರ್ಣ ಸಡಗರವನ್ನು ಪರ ಮಾತ್ಮ ಮಾತ್ರ ಬಲ್ಲ.

ಹಾ....! ಈ ಜೀವನವೆಲ್ಲಾ ಆದರೆ ಮಯ. 'ಆದರೆ' ಒಂದು ಶಬ್ದ ಇಲ್ಲವಾಗಿದ್ದಿದ್ದರೆ ಜೀವನದಲ್ಲಿ ಬೆಳಕಿಗೇನು ಕೊರತೆ ಇರುತಿತ್ತು? ಇದು ಎಷ್ಟೆಷ್ಟು ಜನ್ಮಗಳ ಉಪಾಧಿಯೋ ಭಗವಂತನೇ ಭಲ್ಲ.

ಪ್ರಾತರ್ವಿಧಿ ಮುಗಿಯಿತು, ಎಂದಿನಂತೆಯೇ ಹೊತ್ತು ಉರುಳು ತ್ತಿದೆ.

ಅರುಣ ಅರುಣಾಯಿತವಾಗಿ ಮೇಲೆಮೇಲೆ ಏರಿಹೋದ, ಇಡೀ ನಗರಿಯೇ ಗಜಿಬಿಜಿಯಲ್ಲಿ ಮುಳುಗಿ ಹೋಗಿದೆ. ರಸ್ತೆಯಲ್ಲಿ ಪಾಂಥರು ಅವಸರವಸರವಾಗಿ ಚಲಿಸುತಿದ್ದಾರೆ.

ಜಗನ್ ಒಳಹೋಗಿ ಮಗಳು ಇನ್ನೂ ಮಲಗಿರುವುದನ್ನು ಕಂಡು ಹಿಂದಿರುಗಿ ಆಫೀಸಿಗೆ ಹೊರಟ. ಈ ದಿನ ರಜೆ ತೆಗೆದುಕೊಂಡಿದ್ದಿದ್ದರೆ ಒಳ್ಳೆಯದಿತ್ತು ಎಂಬ ಯೋಚನೆ ನಂದಿನಿಗೆ. ಆದರೆ, ಹಾಗೆಂದು ಹೇಳಲಾರಳು ಬಾಯಿಬಿಟ್ಟು. ಅವನ ಅಪರದ್ದೇಶದ ಮೇಲೆ ಕಣ್ಣು ನೆಟ್ಟು ಅತ್ತಲೇ ನಿಟ್ಟಿಸಿದ ನಂದಿನಿ ಹಾಗೇ ಹಿಂದಿರುಗಿದಳು ಖಿನ್ನಮನಸ್ಕಳಾಗಿ.

ಮನೆಯ ಹಿಂಬದಿಯಲ್ಲಿರುವ ಆಳುಗಳ ಮಕ್ಕಳು ನಾಲ್ವರಿಗೂ ಎಂದಿಗೆ ಕೇಕು ಕೊಯ್ದು ಹಂಚುವರೋ ಎಂಬ ಆತುರ-ಕಾತರ. ಸುಧಾ ಎದ್ದಿದ್ದಾಳೆಯೇ ಎಂದು ಬಾರಿಬಾರಿಗೂ ಹಣುಕುವುದು, ಕೇಕಿನ ಮೇಲೆ ಕಣ್ಣು ಹಾಯಿಸುವುದು ಇದೇ ಕೆಲಸ. ಇಂದು ಶಾಲೆಗೂ ಚೆಕ್ಕರ್. ಅದಕ್ಕೆ ನಂದಿನಿಯ ಒಪ್ಪಿಗೆ ಇದ್ದುದರಿಂದ ತಂದೆ-ತಾಯಿಯರ ಆಕ್ಷೇಪಣೆಯಿರಲಿಲ್ಲ.

ಅಂದು ರಾತ್ರಿ ನಿದ್ದೆ ಮಾಡಿರದ ಸುಧಾಮಣಿಗೆ ಬೆಳಗಿನ ಝಾವದ ತಣ್ಣನೆಯ ವಾತಾವರಣ ತಂಪೂಡಿಸಿದ ಮೇಲೆ ಕಣ್ತುಂಬ ನಿದ್ದೆ-ಈ ಲೋಕದ ಪರಿವೆಯೇ ಇಲ್ಲದಷ್ಟು ನಿದ್ದೆ.

ಗೋಡೆಯ ಮೇಲಿನ ಗಡಿಯಾರ ಗಂಟೆ ಬಾರಿಸಿತು.

ಒಂದು. ಎರಡು. ಮೂರು. ನಾಲ್ಕು. ಐದು. ಆರು. ಏಳು. ಎಂಟು. ಒಂಭತ್ತು. ಹತ್ತು.

ನೆಟ್ಟ ನೋಟ ಗಡಿಯಾರದಿಂದ ಚಲಿಸಲಿಲ್ಲ. ಎದೆಯಾಳದಲ್ಲಿ ನರಳಿದ ಬಿಸಿಯುಸಿರು ನೀಳವಾಗಿ ಹೊರಬಿತ್ತು. ತನಗರಿಯದಂತೆಯೇ ಕಣ್ಣುಗಳಂಚಿನಲ್ಲಿ ಬೆಳ್ಳಿಗೆರೆಯಂತೆ ಸಣ್ಣಗೆ ನೀರಾಡಿತು. ಕರವಸ್ತ್ರದಿಂದ ಕಂಗಳನ್ನು ಒತ್ತಿಕೊಳ್ಳುವುದರೊಳಗಾಗಿ ಕೊಠಡಿಯಿಂದ ಮಗಳ ಕರೆ "ಅಮ್ಮಾ.....!" ದನಿಯಲ್ಲಿ ಅಮಾಯಕತೆಯ ಝರಿಯೇ ಹರಿದು ಬಂತು.

ನಂದಿನಿ ಆ ಕ್ಷಣ ಎದ್ದು ಹೋದಳು. ಸುಧಾಮಣಿ ಎದ್ದು ಹಾಸಿಗೆಯಲ್ಲೇ ಕುಳಿತಿದ್ದಾಳೆ. ಅಸ್ತವ್ಯಸ್ತವಾದ ಕೂದಲು. ನಿದ್ರಾಮುದ್ರಿತ

ಮುಖಬಿಂಬ. ಎರಡೂ ಕೈಗಳಿಂದ ಕಣ್ಣುಗಳನ್ನು ಉಜ್ಜಿಕೊಳ್ಳುತ್ತಿದ್ದಾಳೆ. ನಲ್ಮೆಯಿಂದ ವೈದಡವಿ 'ಸುಧಾಪಾ.....!" ಎಂದಳು ತಾಯಿ.

"ಅಮ್ಮಾ....!" ಎಳೆಯ ದನಿ ಗೋಗರೆಯಿತು.

"ಏನು ಮಗೂ ?"

"ಅಪ್ಪ....."

"ಅಪ್ಪ ಆಗಲೇ ಆಫೀಸಿಗೆ ಹೊರಟು ಹೋದರು. ನೀನು ಬಹಳ ಹೊತ್ತು ಮಲಗಿದ್ದಿ ಇಂದು."

ಸುಧಾಮಣಿ ಮಾತಾಡದೆ ತಲೆಯನ್ನು ಎರಡೂ ಕೈಗಳಿಂದ ಕೆರೆದು ಕೊಂಡಳು. ಮುಗ್ಧ ಮನದಲ್ಲಿ ಯಾವಯಾವ ಭಾವನೆಗಳೋ ....

ಸೊಳ್ಳೆ ಪರದೆಯನ್ನು ಎತ್ತಿ ಮಗಳನ್ನು ಕೆಳಗಿಳಿಸಿ ಮುದ್ದಿಟ್ಟು ಕೊಂಡಳು. ನಂದಿನಿ ಪ್ರಾತರ್ವಿಧಿಯ ಬಳಿಕ ಹೊಸಬಟ್ಟೆ ತೊಡಿಸಿ ತಲೆ ಬಾಚಿ ಕೆಂಪು ರಿಬ್ಬನ್ನಿನಿಂದ ಜೋಕಟ್ಟಿದರೆ ಎಂತಹ ಸೌಂದರ್ಯನಿಧಿ ? ಕಪ್ಪು ಕಣ್ಣುಗಳಲ್ಲಿ ಮಿಂಚಿನ ಹೊಳಪು. ಮುದ್ದು ಮುದ್ದಾದ ಮುಖ ಬಿಂಬ. ಎರಡೂ ಕೆನ್ನೆಗಳಿಗೆ ಹೂಮುತ್ತನೊತ್ತಿದಳು ತಾಯಿ. ತಾಯಿಯ ಕೊರಳನ್ನು ಬಳ್ಳಿಗೈಗಳಿಂದ ತಬ್ಬಿ ಹಿಡಿದುಕೊಂಡಳು ಸುಧಾಮಣಿ.

"ಇಂದು ನಿನ್ನ ಹುಟ್ಟಿದ ಹಬ್ಬ. ನೀನು ಕೇಕ್ ಕೊಯ್ಯಬೇಕು. ಒಳಹೋಗೋಣ ಬಾ ಮಗೂ !" ಮುದ್ದಿಸಿ ಅತ್ಯಂತ ಪ್ರೀತಿಯಿಂದ ನುಡಿದಳು ನಂದಿನಿ.

ಕೊರಳಿಗೆ ಜೋತುಬಿದ್ದ ಸುಧಾಮಣಿ ಕದಲಲಿಲ್ಲ. ಮೃದುವಾಗಿ ಅವಳ ಕೈಗಳನ್ನು ಬಿಡಿಸಿಕೊಂಡು ಬಲವಂತದಿಂದ ನಡೆಸಿದಳು ಅಲ್ಲಿಂದ. ಊಟದ ಮೇಜಿನ ಮೇಲೆ ಮಧ್ಯೆ ದೊಡ್ಡ ಕೇಕ್. ಸುತ್ತಮುತ್ತ ಇತರ ತಿಂಡಿಗಳ ಜೋಡಣೆ. ಪೆಪ್ಪರ್‌ಮೆಂಟ್ ಚಾಕಲೇಟ್‌ಗಳೂ ಇವೆ. ಆಳು ಗಳೂ ಅವರ ಮಕ್ಕಳು ಸುತ್ತಲೂ ನೆರೆದರು. ಎಲ್ಲರ ಮುಖದ ಮೇಲೆ ಸಂತಸದ ಕುಲುಕುಲು ನಗೆ. ಅವರಿಗೆಲ್ಲಾ ಅಂದಿನ ಪಾರ್ಟಿಯ ವಿಚಾರ ವಿನಾ ಬೇರೊಂದರ ಗಮನ ಇಲ್ಲವೇ ಇಲ್ಲ. ಮೇಜಿನ ಮೇಲೆ ಪುಟ್ಟ ಚಾಕು ಅಣಿಯಾಗಿದೆ. ಬೆಲೂನ್‌ಗಳ ಗೊಂಚಲು ಕಣ್ಸೆಳೆಯುತ್ತಿದೆ. ಅವುಗಳನ್ನು ಹಾರಬಿಡುವ ಕಾತರ. ತಿಂಡಿ ತಿನ್ನುವ ಕಾತರ.

ಸುಧಾಮಣಿ ಮೇಜಿನ ಮೇಲಿನ ಅಲಂಕರಣವನ್ನು ನೋಡಿದಳು. ಅವಳ ಮನಸ್ಸಿನ ಮೇಲೆ ಯಾವ ಪರಿಣಾಮವೂ ಆಗಲಿಲ್ಲ. ಅವಳನ್ನು ಎತ್ತಿ ಕುರ್ಚಿಯ ಮೇಲೆ ಕುಳ್ಳಿರಿಸಿದಳು ನಂದಿನಿ.

"ಇಂದು, ನಿನ್ನ ಹುಟ್ಟಿದ ಹಬ್ಬ ಮಗೂ! ನೀನು ಕೇಕ್ ಕೊಯ್ಯ ಬೇಕು." ಮುದ್ದಿನಿಂದ ನುಡಿದಳು ತಾಯಿ. ಎಲ್ಲರೂ ಅದಕ್ಕೆ ಒಗ್ಗೂಡಿ ದನಿಗೂಡಿಸಿದರು.

ಗಣೇಶ್ ಕ್ಯಾಂಡಲ್ಸ್ ಹಚ್ಚಿದ. ನಂದಿನಿ 'ಉಫ್ !' ಎಂದು ಊದಿ ಆರಿಸು ಮಗೂ !" ಎಂದಳು.

"ಇಗೊ ! ಚಾಕು ಇಲ್ಲಿದೆ. ಹೀಗೆ ನೇರವಾಗಿ ಕೊಯ್ದು ಭಾಗ ಮಾಡು."

ಸುಧಾಮಣಿ ಎಲ್ಲರೆಡೆಗೂ ಒಮ್ಮೆ ಪಿಳಿಪಿಳಿ ನೋಡಿದ ನಂತರ ತಾಯಿಯ ಮಾತಿನ ಪ್ರಕಾರ ಕೇಕನ್ನು ಕತ್ತರಿಸಿದಳು. ಎಲ್ಲರೂ ಚಪ್ಪಾಳೆ ತಟ್ಟುತ್ತ Happy birthday to you! Happy birthday to you! ಎಂದು ಹಾಡಿದರು. ಆ ಕೂಡಲೇ ನೈಟ್ರೊಜನ್ ತುಂಬಿದ್ದ ಬೆಲೂನ್‌ಗಳನ್ನು ಹಾರಬಿಟ್ಟರು. ಅವೆಲ್ಲಾ ಮೇಲೆ ಹೋಗಿ ಮಾಡಿಗೆ ಮುಟ್ಟಿ ಮುಂದೆ ಹೋಗಲಾರದೇ ಅಲ್ಲಲ್ಲೇ ತೇಲಾಡತೊಡಗಿದುವು.

ಆನಂತರ ಸಿಹಿಯ ಹಂಚಿಕೆ. ನಂದಿನಿಗೆ ಜಗನ್ ಮನೆಯಲ್ಲಿಲ್ಲವಲ್ಲಾ ಎಂಬ ಸಂಕಟ. ಅವನಿಗೆ ಮೀಟಿಂಗ್ ಇದ್ದುದರಿಂದ ತಪ್ಪಿಸಿಕೊಳ್ಳಲಾಗಲಿಲ್ಲ. ಮಗಳು ಹೊತ್ತಿಗೆ ಮುಂಚೆ ಏಳಬಹುದೆಂದು ಭಾವಿಸಿದ್ದ ದಂಪತಿಗಳು ನಿರಾಶೆಗೊಂಡಿದ್ದರು.

ಪಾರ್ಟಿ ಮುಗಿಯಿತು. ಸುಧಾಮಣಿ ಅಷ್ಟಿಷ್ಟು ತಿಂದಳು. ಎಲ್ಲರ ಉಪಹಾರವೂ ಆಯಿತು. ಬಣ್ಣಬಣ್ಣದ ಬೆಲೂನ್‌ಗಳು ಮಾಡಿಗೆ ಮುಟ್ಟಿ ಅಲ್ಲಲ್ಲೇ ತೇಲುತ್ತಿರುವುದನ್ನು ಕತ್ತೆತ್ತಿ ನೋಡಿದಳು ಸುಧಾಮಣಿ. ಅವು ತೇಲುತ್ತ ಒಂದಕ್ಕೊಂದು ಡಿಕ್ಕಿ ಹೊಡೆಯುತ್ತಿವೆ. ಆಂತರಂಗಿಕ ಮನೋಮಯ–ಅನ್ನಮಯ ವ್ಯವಹಾರದಲ್ಲಿ ಏನೋ ಒಂದು ಬಗೆಯ ನ್ಯೂನತೆ, ಮತ್ತೇನೋ ಒಂದು ಬಗೆಯ ಮಾಂದ್ಯ, ಇನ್ನೇನೋ ಒಂದು ರೀತಿಯ ಚಿಂತನಾ ಶೂನ್ಯತೆ ಸುಧಾಮಣಿಯನ್ನು ಹೆಡೆಮುಡಿಗಟ್ಟಿವೆ. ಎಷ್ಟೆಷ್ಟು

ಪ್ರಯತ್ನಿಸಿದರೂ ಬಿಡಿಸಲಾಗದ ಕಗ್ಗಂಟು ಬ್ರಹ್ಮಗಂಟಾಗಿದೆ. ಅವಳ ಶಾಲಾ ದಿನಗಳಲ್ಲಿ ಜನ್ಮದಿನೋತ್ಸವ ಓರಗೆಯ ಶಾಲಾ ಮಕ್ಕಳೊಡನೆ ವೈಭವದಿಂದ ನಡೆಯುತಿತ್ತು. ಮಕ್ಕಳು ಮನೆಯ ತುಂಬೆಲ್ಲಾ ನಲಿದಾಡುತಿದ್ದರು ನಕ್ಕು ನಗಿಸಿ, ಎಳೆ ನಗುವಿನ ಲಹರಿಯನ್ನು ಹರಿಸಿ.

ಆ ದಿನಗಳು ಸ್ಮರಣೆಯ ಹಾದಿಯಲ್ಲಿ ಸಾಗಿ ಹೋದುವು. ನಂದಿನಿ ಖಿನ್ನ ಮನಸ್ಕಳಾಗಿ ಕುಳಿತಳು.

"ಅಮ್ಮಾ......!"

"ಏನು ಮಗಳೇ ?"

ಅವಳ ಮೌನವೇ ಉತ್ತರವಾಯಿತು.

"ಸುಧಾಮಾ ! ನಿನಗವು ಬೇಕೆ ? ಯಾವ ಬಣ್ಣದ ಬೆಲೂನ್ ಬೇಕು ?

ಅವಳು ಯಾವುದೋ ಒಂದರ ಕಡೆಗೆ ಬೆರಳು ತೋರಿದಳು. ಅವು ಅಲ್ಲಲ್ಲೆ ಮೆಲುಮೆಲ್ಲನೆ ಚಲಿಸುತಿದ್ದುದರಿಂದ ಕಲಸಮೇಲೋಗರವಾದುವು. ನಂದಿನಿ ಅಂಗಡಿಗೆ ಹುಡುಗರನ್ನು ಕಳಿಸಿ ಇನ್ನೂ ಕೆಲವು ಬೆಲೂನ್‌ಗಳನ್ನು ತರಿಸಿದಳು. ಸುಧಾಮಣಿ ಸ್ವಲ್ಪಹೊತ್ತು ಅವುಗಳಲ್ಲಿ ಮನಸ್ಸಿಟ್ಟದ್ದಳೇನೋ.....ಅನಂತರ ಆಸಕ್ತಿಯನ್ನೇ ಕಳೆದುಕೊಂಡಳು.

ಮೇಲೆ ಓಲಾಡುವ ಬೆಲೂನ್‌ಗಳನ್ನು ನೋಡುತಿದ್ದರೆ ಒಡಲೆಲ್ಲಾ ಸಂಕಟ.

*    *    *    *

ಸುಧಾಮಣಿ ಹುಟ್ಟಿನಿಂದ ಆರೇಳು ವರ್ಷಗಳವರೆಗೂ ದೈಹಿಕ-ಮಾನಸಿಕ ಸಂಪತ್ತಿಯಲ್ಲಿ ಯಾವ ಕುಂದುಕೊರತೆಯನ್ನು ಕಾಣದ ಮಗು. ಶಾಲೆಗೆ ಸೇರಿ, ಮೂರನೆಯ ತರಗತಿಯವರೆವಿಗೂ ಸುಖಾನಂದದಿಂದ ಕಲಿಯುತ್ತ ತರಗತಿಗೆ ಮೊದಲನೆಯ ಸ್ಥಾನದಲ್ಲಿ ನಿಲ್ಲುತಿದ್ದ ಮಗು. ಅಪ್ಪ ಅಮ್ಮರ ಮೆಚ್ಚುಗೆಗೆ ಪಾತ್ರವಾದ ಮಗು. ಶಾಲೆಯಲ್ಲಿ ಉಪಾಧ್ಯಾಯಿನಿಯರ ಅಚ್ಚುಮೆಚ್ಚು. ಆಟ ಪಾಠಗಳಲ್ಲಿ ಅತೀವ ಚಟುವಟಿಕೆ. ಯಾವ ಅಪದೇವತೆಯ ಅಭಿಶಾಪವೋ ಮೈನಡುಗುವಂತಹ ಸುಡು ಜ್ವರ ಬಂದು ಶೀತಾಳಿ ಸಿಡುಬು ಕಾಣಿಸಿಕೊಂಡಿತು. ಬೇಸಗೆಯಲ್ಲಿ ಎಲ್ಲಾ ಮಕ್ಕಳಿಗೂ

ಕಾಣಿಸಿಕೊಳ್ಳುವಂತಹ ಕಾಹಿಲೆಯೇ ಅದು. ಮೈಮೇಲಿದ್ದ ಗುಳ್ಳೆಗಳು ಆರೇಳು ದಿನಗಳಲ್ಲಿ ಕಣ್ಮರೆಯಾದುವು. ಅನಂತರ ಜ್ವರವೂ ಬಿಟ್ಟಿತು. ದೈಹಿಕ ಸ್ವಾಸ್ಥ್ಯ ಕೂಡಿ ಬಂದು ಮೊದಲಿನಂತೆಯೇ ಓಡಾಡಿತು ಮಗು.

ಆದರೆ....!

ಔಷಧಿಯ ಪ್ರಭಾವವೋ, ಸಿಡುಬಿನ ಪ್ರಭಾವವೋ ಮಾನಸಿಕ ಶಕ್ತಿ ಕುಂದಿಸಿತು. ಬೌದ್ಧಿಕ ಬೆಳವಣಿಗೆ ನಿಂತಿತು. ಈಗೀಗ ಕಣ್ ದೃಷ್ಟಿಯೂ ಸ್ವಲ್ಪ ಮಂದ. ಅದು ಮುಂದೆಂದಾದರೂ ಪೂರ್ತಿ ಕುರುಡಾಗುವ ಸಂಭವ ಬರಬಹುದೆಂದು ವೈದ್ಯರು ಅಂಬೋಣ.

ಅಂದಿನಿಂದ ವೈದ್ಯರಿಂದ ವೈದ್ಯರಿಗೆ ಅಲೆದು ಸಾಕಾಗಿದೆ. ದೇವರು ಮಂತ್ರ-ತಾಯಿತ ಎಲ್ಲಾ ಮುಗಿದುವು. ಯಾವುದರಿಂದಲೂ ಬೌದ್ಧಿಕ ಸ್ವಾಸ್ಥ್ಯ ಕೂಡಿ ಬರಲಿಲ್ಲ. ಕಲಿತ ಅಕ್ಷರಗಳು ಮರೆತು ಹೋದುವು. ಅಪ್ಪ-ಅಮ್ಮನ ಗುರುತು ಮರೆಯದಿದ್ದರೂ ಸಮಿಪವರ್ತಿಗಳಾದ ಆಳುಗಳು ಮತ್ತು ಅವರ ಮಕ್ಕಳು ಯಾರನ್ನೂ ಅಷ್ಟಾಗಿ ಗುರುತಿಸಲಾರಳು. ನಡೆಯುವಾಗ ಒಮ್ಮೊಮ್ಮೆ ಕಾಲ್ತೊಡರಿ ಮುಗ್ಗರಿಸುದುಂಟು.

ಸಲ್ಲಕ್ಷಣವಾದ ಹುಡುಗಿ ಮೈತುಂಬಿಕೊಂಡಿದ್ದಾಳೆ. ಮಿನುಮಿನುಗುವ ಕಣ್ಣುಗಳನ್ನು ಎಂತಹ ವೈದ್ಯರೂ ಶಂಕಿಸಲಾರರು ನೋಟ ಮಾತ್ರದಿಂದ. ಮೊದಲಿನಂತೆ ವಾಕ್ಚಾತುರ್ಯವೂ ಇಲ್ಲ. ಒಮ್ಮೊಮ್ಮೆ ಮಾತಾಡಿದರೆ ಇನ್ನೊಮ್ಮೆ ಮೂಕಮೌನ. ಅಸಂಬದ್ಧ ಮಾತುಗಳು. ತನಗೆ ಪ್ರಿಯವಾದ ಕೆಲವು ತಿನಿಸುಗಳ ನೆನಪು ಇದ್ದರೂ ತಾನೇ ನೆನಪಿಸಿಕೊಳ್ಳಲಾರಳು. ಅವಳಿಗೊಂದು ಆಟಿಗೆಯ ವಸ್ತು ಎಂದರೆ ಮನೆಯ ಬೆಕ್ಕು ಬಿಲ್ಲಿ. ಅದು ಓಡಿತೆಂದು ಹಿಡಿಯ ಹೋದರೆ ಬೀಳುವುದು ತಪ್ಪಿದ್ದಲ್ಲ. ಗಿರಿಜ ಅವಳನ್ನು ನೋಡಿಕೊಳ್ಳುವ ನರ್ಸ್. ಆದರೂ, ಅವಳಲ್ಲಿ ಅಂತಹ ಪ್ರೀತಿ-ವಿಶ್ವಾಸಗಳು ಇಲ್ಲವೇ ಇಲ್ಲ. ಅಮ್ಮ ಎದುರಿಗಿದ್ದರೆ ಅಮ್ಮನೇ ಇರಬೇಕು. ಅಮ್ಮನ ಸಾಮಿಪ್ಯ ಹಿತ. ಅಪ್ಪನ ಪ್ರೀತಿಗೂ ಕೊರತೆಯಿಲ್ಲ. ಆದರೆ, ಅಪ್ಪ ಹೆಚ್ಚು ಹೆಚ್ಚಾಗಿ ಹೊರಗಡೆ ಇರುತ್ತಾನಾದುದರಿಂದ ಬಳಕೆ ಕಡಿಮೆ. ಆದರೂ ಆತ್ಮೀಯತೆ ಇದ್ದೇ ಇದೆ. ಮನೆಗೆ ಬಂದ ತಕ್ಷಣ ಮೈಗೆ ಮೈ ಹಚ್ಚಿ ಕುಳಿತು 'ಅಪ್ಪ' ಎಂದು ಮುದ್ದಿನ ಮಾತು ಹೊಮ್ಮಿದರೆ ಅಪ್ಪ

ವೈದಡವಿ ಮುದ್ದಿಸುತ್ತಾನೆ. ಬಹುಶಃ ಆ ಪ್ರೀತಿಯ ಅಮೃತತ್ವದ ಅರಿವು ಅಂತರಂಗವನ್ನು ಮುಟ್ಟುವುದು ಅಲ್ಪಸ್ವಲ್ಪವೇ. ಆಂತರಂಗಿಕವಾದ ದಿವ್ಯ ನಿರ್ಲಕ್ಷ್ಯ, ಅರ್ಥಾತ್ ಪರಿಹರಿಸಲಾರದ ಅರ್ಥಹೀನತೆ, ಎಂದಿಗೂ ತೊಡೆಯಲಾಗದ ಅಜ್ಞಾನ ಮಾನಸಿಕ ಚೌಕಟ್ಟನ್ನು ದಾಟಿ ಹೊರ ಹೊಮ್ಮಲಾರದಂತಹ ಪರಿಸ್ಥಿತಿ. ಅಲ್ಲದೆ, ಯಾವೊಂದು ವೈದುಷ್ಯ ಸಂಗತಿಯೂ ಜ್ಞಾನ ಸಂಪುಟದ ಕದವನ್ನು ತಟ್ಟಲಾರದ ಪರಿಸ್ಥಿತಿ.

*   *   *   *

ನಂದಿನಿ ಮಗಳೊಂದಿಗೆ ತೀರ್ಥಯಾತ್ರೆ ಮಾಡಿಬಂದಳು. ನಾನಾ ದೇವರುಗಳಿಗೆ ಹೇಳಿಕೊಂಡ ಹರಕೆಗಳನ್ನು ಪೂರೈಸಿದರೂ ಮಗಳ ಮನಸ್ಸಿಗೆ ಬೆಳಕಿಲ್ಲ. ಮುದುಡಿದ ಚಿತ್ತ ಪ್ರವೃತ್ತಿ ಅರಳಲಿಲ್ಲ. ಆಟಗಳಲ್ಲೂ ಆಸಕ್ತಿಯಿಲ್ಲ. ಕೇರಂ, ಕವಡೆ, ಚನ್ನೆ, ರಂಗು ರಂಗಿನ ಚಿತ್ರಗಳ ಇಸ್ಪೀಟುಗಳು ಯಾವೊಂದರಲ್ಲೂ ನಿರಾಸಕ್ತಿ. ಓರಗೆಯ ಮಕ್ಕಳಲ್ಲೂ ಆಸಕ್ತಿಯಿಲ್ಲ. ನಿಂತಲ್ಲಿ ನಿಲ್ಲದೆ, ಕುಳಿತಲ್ಲಿ ಕೂಡದೆ ಓಡಾಡುತ್ತ ಕಾಲ್ತೊಡರಿ ಬೀಳುತಿದ್ದರೆ ನೋಡುವುದೂ ಕಷ್ಟ. ಹಿಡಿಯುವುದೂ ಕಷ್ಟ.

"ನೋಡು ಮಗೂ ! ಈ ಪುಸ್ತಕ ಎಷ್ಟು ಚೆನ್ನಾಗಿದೆ ? ಎಷ್ಟೊಂದು ಪ್ರಾಣಿಗಳು !"

ಸುಧಾಮಣಿ ಪುಸ್ತಕವನ್ನು ತಳ್ಳಿ ಪಿಳಿಪಿಳಿ ನೋಡಿದಳು. ದೃಷ್ಟಿ ಮಾಂದ್ಯವಾದ ಕಣ್ಣುಗಳಲ್ಲಿ ಎಂತಹ ಮಿಂಚು? ಮುಖದ ಕಳೆ, ಕಣ್ಣುಗಳ ಕಳೆ ಲವಲೇಶವೂ ಕುಗ್ಗಿಲ್ಲ. ಕುಂದಿಲ್ಲ. ದೈಹಿಕ ಬೆಳವಣಿಗೆಯೂ ಅಷ್ಟೆ. ಸರ್ವತ್ರ ಸದಾ ಬೆಳೆಯುವ ಸುಳಿಬಾಳೆಯಂತೆ ಸುಕೋಮಲ ವೈಖರಿಯಲ್ಲಿ ಬೆಳೆಯುತಿದ್ದಾಳೆ ಸುಧಾಮಣಿ.

ಅವಳನ್ನು ಬಿಟ್ಟು ಇರುವಂತೆಯೂ ಇಲ್ಲ. ತನ್ನ ಜೊತೆ ಕರೆದೊಯ್ಯುವಂತೆಯೂ ಇಲ್ಲ. ಕುಡಿಸುವಾಗ-ಉಣಿಸುವಾಗ ಚೆಲ್ಲಾಡಿ ಹೋಗುತ್ತೆ ಆಹಾರ. ಗಂಡುಮಗುವಾಗಿದ್ದಿದ್ದರೂ ವ್ಯಥೆಯಿರಲಿಲ್ಲ. ಹೆಣ್ಣು ಮಗುವಾಗಿ ಹೀಗಾಗಬಾರದಿತ್ತು....ಇದು ತುಂಬಾ ದುಃಖದ ಸಂಗತಿ ಎಂಬ ಕೊನೆಗಾಣದ ಸಂಕಟ ಮಂತ್ರ ಎದೆಯ ನೆಲೆಯಲ್ಲಿ, ಹೆತ್ತ ತಾಯಿಗೆ.

ನಂದಿನಿ ಮಗಳಿಂದಾಗಿ ಮೆಟ್ಟಿಲು ಇಳಿಯುವ ತೊಂದರೆ ತೆಗೆದು ಕೊಳ್ಳಲಿಲ್ಲ. ಮನೆಯಲ್ಲಿ-ಅಂಗಳದಲ್ಲಿ ಮಗಳ ಒಡನಾಟ. ರಾತ್ರಿ ನಿದ್ದೆ ಮಾಡದ ದಿನಗಳಿಗೂ ಕೊರತೆಯಿಲ್ಲ-ಆವ ಕಾರಣವೋ ಎದ್ದು ಹುಚ್ಚು ಚ್ಚಾಗಿ ಓಡಾಡುತ್ತ "ಅಮ್ಮಾ!.....ಅಮ್ಮಾ!" ಎಂದು ಮುಸಿ ಮುಸಿ ಅಳು ತಿದ್ದರೆ ತಾಯಿಗೆ ನಿದ್ದೆಯೂ ಇಲ್ಲ, ಶಾಂತಿಯೂ ಇಲ್ಲ.

ಹಿಂದೆ ಶಾಲೆಗೆ ಹೋಗುತಿದ್ದ ದಿನಗಳಲ್ಲಿದ್ದ ಬೌದ್ಧಿಕ ಕರಂಡದ ದೀಪ್ತಿ ನಂದಿ ಹೋಗಿದ್ದರೂ ಒಮ್ಮೊಮ್ಮೆ ಅನಿರೀಕ್ಷಿತವಾಗಿ ಒಂದು ಮಾತಿನಲ್ಲೋ, ಕೃತಿಯಲ್ಲೋ ಕ್ಷಣಮಾತ್ರ ಹೊಮ್ಮಿ ಮಾಯವಾಗುವುದುಂಟು. ಅಂತಹ ಸಂದರ್ಭದಲ್ಲಿ ಆ ಮಧುರ ಕ್ಷಣವನ್ನು ಪುನಃ ಕಾಂಬಾಸೆ ತಾಯಿಗೆ. ಪುನಃ ಎಷ್ಟೆಷ್ಟು ಪ್ರಯತ್ನಿಸಿದರೂ ಅದರ ಪುನರಾವೃತ್ತಿ ಕನಸಿನ ಗಂಟು. ಆ ಸೋಲಿನ ವ್ಯಘಾತ ಕಣ್ಣುಗಳಲ್ಲಿ ಕಂಬನಿ ತರಿಸುತ್ತದೆ. ನಂದಿನಿ ಚಿಂತಾ ಕ್ರಾಂತಳಾಗಿರುತ್ತಾಳೆ.

* * * *

ಸುಧಾಮಣಿಯ ಗೆಳತಿ ರಾಣಿ ಬಂದಿದ್ದಳು. ಅವಳು ಒಳ ಹೆಜ್ಜೆ ಯಿಡುತ್ತಲೂ ಸುಧಾಮಣಿ ನೆಟ್ಟ ದಿಟ್ಟಿಯಿಂದ ನೋಡಿ "ಬಾ....!" ಎಂದಳು, ಸುಮ್ಮನೆ ಸಹಜವಾಗಿ.

ರಾಣಿ ಮೈಗೆ ಮೈ ಹಚ್ಚಿ ಪಕ್ಕದಲ್ಲಿ ಕುಳಿತು "ಸುಧಾ.....! ಹೇಗಿದ್ದೀ? ನಾಳೆಯಿಂದ ಶಾಲೆಗೆ ಬರುತ್ತೀ ತಾನೇ ?" ಎಂದಳು ಗೆಳತಿಯ ಕೈ ಹಿಡಿದು ಕೊಂಡು.

ಸುಧಾಮಣಿ ಅವಳನ್ನೇ ನೋಡುತ್ತ "ಊ..........ಊ...." ಎಂದಳು, ಎಂದಿನಂತೆಯೇ.

"ಅಂದರೆ ಬರುತ್ತೀ ತಾನೇ ?"

ಸುಧಾಮಣಿ ಮುಗುಳುನಗೆ ಬೀರಿದಳು. ಮಾತಾಡಲಿಲ್ಲ.

"ನಾನು ಶಾಲೆಗೆ ಹೋಗುವೆ ನನ್ನ ಜೊತೆ ಬಾ."

ಸುಧಾಮಣಿ ತನ್ನಲ್ಲೇ ಏನೋ ತರ್ಕಿಸಿದಂತೆ ಹುಬ್ಬೆತ್ತಿ ನೋಡುತ್ತ ತಾಯಿಯನ್ನು ಕೇಳಿದಳು "ಅಮ್ಮಾ! ಚ.....ಕ್ಕ ...ಲಿ !"

ಅರೆ! ಎಂತಹ ಆಶ್ಚರ್ಯ! ಚಕ್ಕಲಿಯ ಹೆಸರು ಮರೆತು ಹೋಗಿ ಯಾವ ಕಾಲವಾಗಿತ್ತೋ..... ಈಗ ಚಕ್ಕಲಿ ಅನ್ನಬೇಕಾದರೆ ಖಂಡಿತ ವಿಶೇಷವೇ. ಅವಳಿಗೆ ನೆಗಡಿ ಕೆಮ್ಮು ಅಂಟಿತ್ತು. ಆದರೂ, ಚಕ್ಕಲಿಯನ್ನು ಸಂತಸದಿಂದ ಕೊಟ್ಟು "ಇದರ ಹೆಸರೇನು? ಇನ್ನೊಮ್ಮೆ ಹೇಳು!" ಎಂದಳು ನಂದಿನಿ. ಹೃನ್ಮನಗಳ ಹಂಬಲ ಅವಳ ಉತ್ತರವನ್ನು ಅತ್ಯಾಸೆ ಯಿಂದ ನಿರೀಕ್ಷಿಸಿತು. ಆದರೆ, ಅವಳು ಚಕ್ಕಲಿ ತಿಂದಳೇನೋ ಹೌದು. ಚಕ್ಕಲಿಯ ರುಚಿಯಾಗಲೀ, ಹೆಸರಾಗಲಿ ಹೇಳಲು ಸಮರ್ಥಳಾಗಲಿಲ್ಲ. ದೃಷ್ಟಿಮಾಂದ್ಯ ದಿನದಿನಕ್ಕೂ ವೃದ್ಧಿಸಿದಂತೆ ಬುದ್ಧಿಮಾಂದ್ಯವೂ ಹೆಚ್ಚು ತಿದ್ದುದು ಸುಸ್ಪಷ್ಟ.

ನಂದಿನಿ ತೀರಾ ಸೋತು ಹೋದಳು. ಮಾನವೀಯ ಶಕ್ತಿ ಮುದು ಡಿತು. ಬದುಕು ಕ್ಷಣಕ್ಷಣಕ್ಕೂ ನಿಸ್ಸಾರ. ಈ ತರದ ಬಾಳಾದರೂ ಏಕೆ ಬೇಕು? ಎಂಬ ಪ್ರಶ್ನೆ ಕಾಡುತ್ತಲೇ ಇರುತ್ತದೆ. ಈ ಸಂಸಾರದಿಂದ ನಾವಿಬ್ಬರೂ ಅರುಗಾದರೆ ಜಗನ್ ಖಂಡಿತ ಜೀವನದಲ್ಲಿ ಹೊಸ ಬೆಳಕು ಕಾಣಲು ಅವಕಾಶವಿದೆ. ನಮ್ಮ ಬದುಕಿನಿಂದ ಜಗನ್ ಜೀವನ ದಳ್ಳುರಿ ಯಲ್ಲಿ ಬೇಯಬಾರದು. ಇನ್ನೂ ಮಧ್ಯಪ್ರಾಯದ ಗುಣಶೀಲ ವ್ಯಕ್ತಿ ಸಮಾಜದಲ್ಲಿ ಗಣ್ಯ ಪುರುಷ!

ಅಂದ ಮೇಲೆ.....!

*  *  *  *

"ಸುಧಾಮಣಿ.....!"

"..............."

"ಸುಧಾಮಾ....!

ಎತ್ತಲೋ, ಯಾವ ಲೋಕದಲ್ಲೋ ಮುಳುಗಿದ್ದ ಸುಧಾಮಣಿಯ ಕಿವಿಗಳಿಗೆ ತಾಯಿಯ ಕರೆ ರಪ್ಪನೆ ಅಪ್ಪಳಿಸಿತೋ ಏನೋ..... ತಲೆಯೆತ್ತಿ ತಾಯಿ ತಡೆ ನೋಡಿದಳು ಆ ನೋಟದಲ್ಲಿ ಮುಗ್ಧತೆ ಅಲ್ಲ, ಅಲ್ಲವೇ ಅಲ್ಲ. ಎಲ್ಲೋ ಪರಿತ್ಯಕ್ತ, ಇನ್ನೆಲ್ಲಾ ಅಲಕ್ಷಿತ ಆಸೆಯ ಛಾಯೆ ಒಂದೆರಡು ಗಳಿಗೆಯ ಕಾಲ ಕಣ್ಣುಗಳಿಗೆ ಕಳೆಕಟ್ಟಿ ಮಿನುಗಿ ಮಾಯವಾಯಿತು. ನಂದಿನಿ ಆ ಕ್ಷಣಭಂಗುರತೆಯನ್ನು ಕಂಡು ಆಸೆ-ಪ್ರೀತಿಗಳ ಆಗರವಾಗಿ ಮಗುವನ್ನು

ಅಪ್ಪಿ ಮುದ್ದಿಸಿ ಮುದ್ದಾಡಿ ನುಡಿದಳು "ಆಗ ನಾನು ಕರೆದಾಗ ನಿನಗೇನೆನಿಸಿತು ಸುಧಾಮಾ ?"

"ಊ.....ಎಂದಷ್ಟು ನುಡಿದು ಏನೂ ಇಲ್ಲವೆಂಬಂತೆ ತಲೆಯಾಡಿಸಿದಳು.

ನಂದಿನಿ ಎರಡೂ ಕೈಗಳ ಬೊಗಸೆಯಲ್ಲಿ ಅವಳ ಮುಖವನ್ನು ಹಿಡಿದುಕೊಂಡು ಹಣೆಗೆ ಹಣೆಯನ್ನು ಗಟ್ಟಿಸಿ ನಲ್ಮೆಯಿಂದ ಕೇಳಿದಳು "ನೀನು ಸ್ಕೂಲು ಮರೆತು ಬಿಟ್ಟಿಯಾ ?"

"ಇಲ್ಲ...."

"ಸ್ಕೂಲಿಗೆ ಹೋಗಬೇಕೆನಿಸುತ್ತಿದೆಯೇ ?"

"ಹೌದು" ಎಂಬಂತೆ ತಲೆಯಾಡಿಸಿದಳು ಸುಧಾಮಣಿ.

"ನಿನ್ನ ಮಿಸ್ ಗೊತ್ತಾ ?"

"..............."

"ಈ ದಿನ ನಿನ್ನ ಗೆಳತಿ ರಾಣಿ ಬರುತ್ತಾಳೆ."

"ರಾ....ನಿ !"

"ಹೌದು ರಾಣಿ ಬರುತ್ತಾಳೆ. ಅವಳಿಗೇನು ಕೊಡುತ್ತಿ ?"

"ಚಾಕಲೆಟ್....."

ಅವಳನ್ನು ತಬ್ಬಿ ಕೊರಳನ್ನು ಬಳಸಿ ಮುದ್ದಿಟ್ಟುಕೊಂಡು ಕೇಳಿದಳು ನಂದಿನಿ "ಅವಳಿಗೆ ಬರೀ ಚಾಕಲೆಟ್ ಸಾಕೆ ? ಏನಾದರೂ ಒಳ್ಳೆಯ ತಿಂಡಿ ಕೊಡಬೇಕು. ನೀನು ಏನು ಕೊಡುತ್ತಿ ಹೇಳು ? ಇನ್ನು ಯಾವ ತಿಂಡಿ ಇಷ್ಟ ?"

ಸುಧಾಮಣಿ ಆ ಮಾತಿಗೆ ತಾಯಿಯನ್ನೇ ನೆಟ್ಟ ನೋಟದಿಂದ ನೋಡಿದಳು. ಆ ನೋಟದಲ್ಲಿ ಯಾವ ಸಂವೇದನೆ ಇತ್ತೋ. ಅದನ್ನು ವ್ಯಕ್ತಪಡಿಸುವ ಶಕ್ತಿ ಇರಲಿಲ್ಲವಾದುದರಿಂದ ಮುಖ ಮುದುಡಿತು.

"ಸುಧಾಮಾ....ಸ್ವಲ್ಪ ಯೋಚನೆ ಮಾಡು."

"..............."

"ದೇವರಿಗಾಗಿ-ಈ ಅಮ್ಮನಿಗಾಗಿ ಯೋಚನೆ ಮಾಡು ಮಗೂ !"

"ಯೋಚನೆ.....? ದೇವರು ! ಅಮ್ಮ....! ಇದೆಲ್ಲಾ ಏನು ?"

ಧ್ವನಿ ಅಸ್ಪಷ್ಟವಾದರೂ ಪ್ರಶ್ನೆ ಅಂತರಂಗವನ್ನು ಮುಟ್ಟಿತು. ನಂದಿನಿ ಮಗುವನ್ನು ಮುದ್ದಿಸಿ ನುಡಿದಳು." ನೀನು ತುಂಬಾ ಯೋಚನೆ ಮಾಡಬೇಕು. ಯೋಚಿಸದೆ ಮನಸ್ಸು ತಿಳಿಯಾಗದು. ನೋಡು, ಈ ಪೆನ್ಸಿಲ್ ಮೊನೆ ಯಾರು ಮುರಿದದ್ದು ? ನೀನಾ ?"

"..........."

"ಸುಧಾಮಾ.....!"

ಅವಳ ಮೌನವೇ ಉತ್ತರವಾಯಿತು.

* * * *

ಹನ್ನೆರಡು–ಹದಿಮೂರು ವರುಷ.....! ಇನ್ನು ಸ್ತ್ರೀ ಯೋಗದ ಅನುಭವ.....ಒಂದಲ್ಲ, ಒಂದು ದಿನ ಬಂದೇ ಬರುತ್ತೆ ! ಹಾ ! ಮುಂದೇನು ಗತಿ? ಮಗು ಸಣ್ಣವಳಾಗಿದ್ದರೆ ತೊಡೆಯ ಮೇಲಿರುತಿದ್ದಳು. ಇನ್ನು ಮುಂದೆ.....? ಹೇಗೆ ಕಾಪಾಡಲಿ ? ನಾನಾದರೂ ಎಷ್ಟು ದಿನ ಇದ್ದೇನು ? ನನ್ನ ನಂತರ ಮಗುವಿನ ಗತಿ ? ಹಾ.....! ಒಂದು ವೇಳೆ ನಾವಿಬ್ಬರೂ ಒಂದೇ ದಿನ....ಒಂದೇ ಗಳಿಗೆಯಲ್ಲಿ ಶಿವ ಸಾಯುಜ್ಯ ಹೊಂದಿದರೆ ಎರಡೂ ಜೀವಕ್ಕೆ ತಣ್ಣಗಿರುತ್ತೆ. ಭಗವಂತ ಅಷ್ಟು ಉಪಕಾರ ಮಾಡಬಲ್ಲನಾದರೆ.....? ಓ.....! ಅದಕ್ಕೆ ಭಗವಂತನ ಮೊರೆ ಹೋಗುವುದಕ್ಕಿಂತ ನಾನೇ ಕ್ರಮ ಕೈಕೊಂಡರೆ.....? ಅಯ್ಯೊ, ತಾಳಲಾರೆ....ಯೋಚಿಸಲೂ ಆರೆ. ಇದು.... ಇದು ಜಗನ್‌ಗೆ ಖಂಡಿತ ಅನ್ಯಾಯ.......... ಅನ್ಯಾಯ. ಜಗನ್ ನಿರುಪದ್ರವಿ....ದಯಾವಂತ.....! ಆದರೆ, ನಾನು ಮಗುವಿನೊಂದಿಗೆ ಬದುಕಿದ್ದರೆ ಇಡೀ ಜೀವಮಾನವೆಲ್ಲ ಕೊರಗು. ಸಾವಿನಲ್ಲೂ ಶಾಂತಿ ಸಿಗುವುದಿಲ್ಲ..... ಇದಕ್ಕೇನು ಪರಿಹಾರ ? ಹಾ.....! ಪರಿಹಾರ ಇಲ್ಲವೇ ಇಲ್ಲ. ಸುಧಾಮಣಿ ಬುದ್ಧಿಬೆಳೆದು ಎಲ್ಲರಂತೆ ಆಗುವುದು ಸಾಧ್ಯವೇ ಇಲ್ಲ. ಒಂದು ವೇಳೆ ನಾವಿಬ್ಬರೂ ಹೋದರೆ ಜಗನ್ ಬೇರೆ ಮದುವೆಯಾಗಿ ಹೊಸಬಾಳು ಬಾಳುವುದಕ್ಕೆ ಅವಕಾಶವಿದೆ. O ! my God ! ಈ ಸಂಕಟ...ಸಂಕಷ್ಟ ಬೇಡವೇ ಬೇಡ. ತಾಳಲಾರೆ.....ಐದು ವರ್ಷಗಳಿಂದ ಭ್ರಾಮಕಲೋಕದಲ್ಲಿ ನಿರಾಶಾದಾಯಕ ಬದುಕು.

ನಂದಿನಿಯ ಮನದೋಟಕ್ಕೆ ತಟ್ಟನೆ ಲಗಾಮು ಹಾಕುವಂತೆ ಸುಧಾಮಣಿ ಹಾಸಿಗೆಯಿಂದಲೇ ಕರೆದಳು "ಅಮ್ಮಾ!"

ಎಷ್ಟೋ ವೇಳೆ "ಅಪ್ಪ" ಎಂಬುದು ಮರೆತು ಹೋಗಿರುತ್ತೆ· "ಅಮ್ಮಾ" ಮಾತ್ರ ಎಂದೂ ಮರೆಯಲಿಲ್ಲ. ನಂದಿನಿ ತಟ್ಟನೆ ಎದ್ದು ಹೋದಳು. ಹಾಸಿಗೆಯ ಮೇಲೆ ಕುಳಿತಿದ್ದ ಸುಧಾಮಣಿಯ ಕಣ್ಣುಗಳು ಬಾಗಿಲ ಕಡೆಗೇ. ಆ ಮುದ್ದು ಮುಖದಲ್ಲಿ ಎಂತಹ ಖಳೆ? ಕಪ್ಪು ಕಣ್ಣಾಲಿಗಳ ಶೋಭೆ? ದೃಷ್ಟಿಮಾಂದ್ಯದ ಸೂಚನೆ ಸ್ವಲ್ಪವಾದರೂ ಇಲ್ಲ ವಲ್ಲಾ? ಇಂತಹ ಮಗುವಿಗೆ ದೇವರು ದಯೆ ತೋರಬಾರದೇ? ದಿನವೂ ಅವಳ ಹೆಸರಿನಲ್ಲಿ ನಂದಾದೀಪ ಉರಿಯುತ್ತಲೇ ಇದೆ. ಧ್ಯಾನ ಪ್ರಾರ್ಥನೆ ನಡೆಯುತ್ತಲೇ ಇವೆ. ಆದರೂ, ಸಮಸ್ಯೆ ಬಗೆ ಹರಿಯಲಿಲ್ಲ.....ಎದೆಯ ಹಕ್ಕಿ ನರಳಿತು.

ನಂದಿನಿ ಮಗುವನ್ನು ಮುದ್ದಿಟ್ಟು "ಏನಮ್ಮಾ?" ಎಂದಳು ನಲ್ಮೆ ಯಿಂದ.

"ಅಮ್ಮಾ.....ಅ.....ಮ್ಮಾ.....!"

"ಏನು ಹೇಳು? ನಿನಗೇನು ಬೇಕು ಯೋಚನೆ ಮಾಡಿ ಹೇಳು?"

"ಯೋಚನೆ.....?" ಮುಖ ಮುದುಡಿತು. ಅವಳು ದಡಕ್ಕನೆ ಮಂಚ ದಿಂದ ಇಳಿದಳು. ತಾಯಿಯ ಆಸರೆ ಇಲ್ಲದಿದ್ದರೆ ಬೀಳುತಿದ್ದಳೇನೋ..... ಬೀಳದಂತೆ ಹಿಡಿದುಕೊಂಡ ನಂದಿನಿ ಹೇಳಿದಳು "ಮಗೂ ನಿನ್ನ ಹೆಸರೇನು ಹೇಳು?

"ನನ್ನ ಹೆಸರು........." ಅಷ್ಟಕ್ಕೇ ಸುಮ್ಮನಾಗಿ ಕಿಲಕಿಲ ನಕ್ಕಳು ಸುಧಾಮಣಿ·

ನಂದಿನಿಯ ಹೃದಯಕ್ಕೆ ಮುಳ್ಳು ಮುರಿದಂತಾಯಿತು.

* * * *

ಸುಧಾಮಾ.....! ನನ್ನ ಹೃನ್ಮಣಿ. ಕಣ್ಮಣಿ. ನೀನು ಕಾಹಿಲೆ ಬಿದ್ದಾಗ ನಿರ್ಲಕ್ಷ್ಯ ತೋರಲಿಲ್ಲ. ನನ್ನಿಂದಾದಷ್ಟು ಲಕ್ಷ್ಯವಿಟ್ಟು ಪ್ರೀತಿ ಯಿಂದ ಶ್ರದ್ಧೆಯಿಂದ ಆರೈಕೆ ಮಾಡಿರುವೆ. ನಿನ್ನನ್ನು ನೋಡಿಕೊಂಡ ಡಾಕ್ಟರೂ ಕೂಡ ಒಳ್ಳೆಯವರೇ! ಯಾರೂ ನಿನ್ನ ಬಗ್ಗೆ ನಿರ್ಲಕ್ಷ್ಯ

ತೋರಲಿಲ್ಲ. ನಿನ್ನನ್ನು ಮೂಲೆಗುಂಪು ಮಾಡಿದ್ದು ಭಗವಂತ ಅಥವಾ ದುರ್ವಿಧಿ ಅಲ್ಲ ಅಲ್ಲವೇ ಇಲ್ಲ. ನಮ್ಮ ಜನ್ಮಾಂತರಗಳ ಕರ್ಮ. ಹಾಯ್! ಆ ಕರ್ಮ ನನ್ನನ್ನೇ ಕೊಂಡೊಯ್ದಿದ್ದರೆ ಒಳ್ಳೆಯದಿತ್ತು. ನಿನ್ನನ್ನು ಈ ಗತಿಗೆ ಇಳಿಸಿತೇಕೆ? ಸುಧಾಮಣಿ! ನಿನ್ನ ಸ್ಥಿತಿಯನ್ನು ನೋಡಲಾರೆ. ದೈಹಿಕ ಶಕ್ತಿ ಚೆನ್ನಾಗಿದೆ. ದುಂಡುದುಂಡಗೆ ಮುದ್ದುಮುದ್ದಾಗಿದ್ದೀ! ಬುದ್ಧಿಬಲ ಕುಸಿದದ್ದೇ ಕಷ್ಟಕ್ಕೆ ಬಂದಿದೆ. ಕಾಲಮಾನ ಸ್ವಲ್ಪವೂ ತಂಗುವುದಿಲ್ಲ. ಓಡುತ್ತಲೇ ಇರುತ್ತದೆ. ಮುಂದೇನು? ಇದು ಒಡಲಾಳದ ಪ್ರಶ್ನೆ. ಎಂದಿಗೂ ಬಗೆಹರಿಸಲಾಗದ ಪ್ರಶ್ನೆ. ವೈದ್ಯರು, ದೇವರು, ತಾಯಿ ತಂದೆ ಯಾರೂ ಪರಿಹರಿಸಲಾರದ ಪ್ರಶ್ನೆ. ನಾನಿನ್ನು ತಾಳಿಕೊಳ್ಳಲಾರೆ. ಈ ದುಃಖಪೂರಿತ ಪ್ರಪಂಚದಲ್ಲಿ ನಮಗೆ ಬದುಕು ಬೇಡವೇ ಬೇಡ. ಸುಧಾಮಾ.....! ನಾವಿಬ್ಬರೂ ಒಟ್ಟಿಗೇ ಈ ಪ್ರಪಂಚ ಬಿಟ್ಟರೆ ಮುಂದೆ ಹುಟ್ಟುವಾಗ ಒಟ್ಟಿಗೇ ಒಂದೇಕಡೆ ಹುಟ್ಟುವೆಯಾದರೆ, ದೇವರು ಅಷ್ಟಾದರೂ ಉಪಕರಿಸಿದರೆ ನಮ್ಮ ಜನ್ಮ ಸಾರ್ಥಕ. ಇಂದೆಂದಾದರೂ ಸಾಧ್ಯವೇ? ನಾವು ಅಷ್ಟೊಂದು ಧನ್ಯಾತ್ಮರೇ? ಹಾ.....! ಧನ್ಯಾತ್ಮರಿಗೂ ಈ ಕಷ್ಟ ತಪ್ಪಿದ್ದಲ್ಲ. ಅದು ನನಗೊತ್ತು. ಆದರೂ, ನಾನು ಈ ಸಂಕಟದಿಂದ ಪಾರಾಗಲೇಬೇಕು.....ಬೇಕು.

* * * *

ಮರುದಿನ ಮಂಚದ ಮೇಲೆ ಮಗಳನ್ನು ತಬ್ಬಿದಂತೆಯೇ ತಾಯಿ ಮಗಳಿಬ್ಬರೂ ಹೆಣವಾಗಿ ಮಲಗಿದ ದೃಶ್ಯ ಹೃದಯ ವಿದ್ರಾವಕವಾಗಿತ್ತು.



# ಬಿಂಗ್ ಮಿಥೆಲ್

Love is nothing save an insatiate thirst to enjoy a greedily desired object.

ಪೈನ್ ಮರಗಳು ದಟ್ಟಣಿಸಿದ್ದ ಆ ತಾಣ ಗಂಭೀರ ಸುಂದರ ಎಂದರೆ ಅತ್ಯುಕ್ತಿಯಾಗಲಾರದು.

ಜನ ಜಂಗುಳಿಯ ಸದ್ದು ಏನೇನೂ ಇಲ್ಲ.

ರೈಲುಗಳು ಹಾದು ಹೋಗುವಾಗ ಮಾತ್ರ ಸದ್ದು-ಗದ್ದಲ.

ಅಲ್ಲಿಂದ ಸ್ವಲ್ಪೇ ದೂರದಲ್ಲಿ ಸಣ್ಣ ರೈಲು ನಿಲ್ದಾಣ. ರೈಲು ಹೋಗಿ ಬರುವಾಗ ಹಸಿರು ಕೆಂಪು ಬಾವುಟ ತೋರಿಸುವುದು ಲೈನ್‌ಮನ್ ಮಿಥೆಲ್ ಕೆಲಸ. ರೈಲು ಹೊರಟ ನಂತರ ಅವನು ಪೈನ್ ಮರಗಳ ತಣ್ಣನೆಯ ತಾಣವನ್ನು ಆಶ್ರಯಿಸುವುದು ಅಂದಿಂದಿನ ವಾಡಿಕೆ. ಅಲ್ಲಿನ ಕಸಕಡಿಗಳನ್ನು ತೆಗೆದು ವಾಸಯೋಗ್ಯವಾಗಿ ಮಾಡಿಕೊಂಡದ್ದು ಅವನೇ. ನಿಲ್ದಾಣದ ಉರಿಬಿಸಿಲ ತಾಣಕ್ಕಿಂತ ತೋಪು ಎಷ್ಟೋ ಮೇಲು. ಬರುವಾಗ ಸ್ಯಾಂಡ್‌ವಿಚ್ ತಂದರೆ ಸಾಯಂಕಾಲ ಮನೆ ಸೇರುವವರೆಗೆ ನಿಶ್ಚಿಂತೆ.

ಬಿಂಗ್ ಮಿಥೆಲ್ ಶಾಲೆಯಿಂದ ನಾಲ್ಕು ಗಂಟೆಗೇ ಹಿಂದಿರುಗುವ. ನೆರೆಮನೆಗಳ ಓರಗೆಯ ಮಕ್ಕಳೊಡನೆ ಆಟವಾಡಿ ಹೊತ್ತು ಕಳೆಯುತ್ತಾನೆ. ತಂದೆ ಮನೆಗೆ ಮರಳಿದ ನಂತರ ಮುದ್ದು ಮುದ್ದಾಗಿ ಓಡಿ ಬರುತ್ತಾನೆ ತಂದೆಯ ಬಳಿಗೆ. ತಾಯಿ ಸ್ವರ್ಗಸ್ಥಳಾಗಿ ಎರಡು ವರ್ಷಗಳೇ ಉರುಳಿದುವು. ಆ ತಾಯಿಯ ಚಿತ್ರವೂ ಈಗೀಗ ಮನಸ್ಸಿನಿಂದ ಮರೆಯಾಗಿರುವುದು ಸತ್ಯ. ಅಂದು, ತಾಯಿ ಸತ್ತ ತರುಣದಲ್ಲಿ ಮಗುವನ್ನು ಸುಧಾರಿಸಬೇಕಾದರೆ ಸಾಕು ಸಾಕಾಗಿತ್ತು ಮಿಥೆಲ್-ಗೆ. ಮಗನಿಗೆ ತಾಯಿಯೂ ತಾನೇ. ತಂದೆಯೂ ತಾನೇ. ಕೆಲಸಕ್ಕೆ ಒಂದು ತಿಂಗಳು ರಜೆ ಹಾಕಿ ಮಗನನ್ನು

ಸಮಾಧಾನಿಸಿದ್ದ. ನಾಲ್ಕು ವರ್ಷ ವಯಸ್ಸಿನ ಬಿಂಗ್ ಮಿಥೆಲ್‌ಗೆ ತಾಯಿಯ ಸಾವು ಅರ್ಥವಾಗದಿದ್ದರೂ ಶವದಾನಿಯಲ್ಲಿ ಮಲಗಿಸಿ ಕೊಂಡೊಯ್ದುದು ಎಳೆಯ ಮನಸ್ಸಿಗೆ ಮುಟ್ಟಿತ್ತು. ಅನಂತರ ತಾಯಿ ಮನೆಯಲ್ಲಿ ಇಲ್ಲವಾದುದು ಬಹಳಕಷ್ಟ-ಸಂಕಟಗಳ ಕೂಪ. ಅವನು ತಂದೆಯನ್ನು ಕ್ಷಣವೂ ಬಿಟ್ಟಿರಲಾರ. ಅಳು-ಅಳು: ಹಗಲೆಲ್ಲ ಅಳು. ಲೈನ್‌ಮನ್ ಮಗನಿಗೆ ಯಾವುದಾದರೊಂದು ಕೆಲಸವನ್ನು ಹೇಳಿಯೋ, ಅಥವಾ ಕಥೆಯನ್ನು ಹೇಳಿಯೋ, ಪ್ರಾಣಿಗಳ ವಿಚಾರ ತಿಳಿಸಿಯೋ ಅಳುವನ್ನು ಸಮಾಧಾನಿಸುತಿದ್ದ. ರಾತ್ರಿಯಡಿಗೆ ಮಾಡಿಕೊಂಡು ಮಗನನ್ನು ಮುದ್ದಿಸಿ ಮುದ್ದಿಸಿ ಉಣ್ಣಿಸಿದರೆ ದೊಡ್ಡ ಹೊರೆಯನ್ನು ಇಳಿಸಿಕೊಂಡಷ್ಟು ಸಮಾಧಾನ. ಅನಂತರ ರಾತ್ರಿ ಸೆಜ್ಜೆಯನ್ನು ಸೇರಿ ಕಣ್ಣಿಗೆ ನಿದ್ದೆ ಹತ್ತುವವರೆಗೂ ಕಥೆ ಹೇಳಿ ಮಗನನ್ನು ಓಲೈಸುವುದು ಮಡದಿಯ ಅಗಲಿಕೆಯ ಒಡಲ ಸಂಕಟಕ್ಕೆ ಕಿಂಚಿತ್ ತಡೆ. ಅನಂತರ ತನಗೆ ನಿದ್ದೆ ಹತ್ತುವವರೆಗೂ ದುಃಖದ ಗೋಳು ಇದ್ದದ್ದೇ. ಮನಸ್ಸು ಮಡದಿಯ ಸುತ್ತಮುತ್ತ ಸುಳಿಸುತ್ತುತ್ತ 'ಪಮಿಲಾ' ಮಂತ್ರವನ್ನು ಹಾಡುತ್ತಲೇ ಇರುತ್ತದೆ. ಅವಳ ಒಡನಾಟದ ಸವಿ ಉಂಡದ್ದು ಎರಡೇ ವರ್ಷವಾದರೂ ಮರೆಯದ ವಸ್ತುವಲ್ಲ ಪಮಿಲಾ.

* * * *

"ಪಮಿಲಾ ಆರೋಗ್ಯ ಹೀನೆ ಅವಳನ್ನು ವರಿಸಬೇಡ" ಎಂದು ಅನೇಕ ಧ್ವನಿಗಳು ಸಲಹೆ ನೀಡಿದ್ದುಂಟು. ಆದರೆ, ಅವಳ ದೀನಾತಿದೀನ ನೋಟ ಎದೆಯಾಳಕ್ಕೆ ಇಳಿದು ಅಂತರ್ಯದಲ್ಲಿ ಕೈಯಾಡಿಸಿ ಕಾರುಣ್ಯ ದ್ರವ್ಯವನ್ನು ಕೋಡಿ ಹರಿಸಿದ್ದು ನಿಜ. ಆ ಕಡ್ಡಿ ಶರೀರವನ್ನು ಯಾವೊಬ್ಬ ಗಂಡಸು ಬಯಸದಿದ್ದುದರಿಂದ ಅವಳು ಬಹುಕಾಲ ಕುಮಾರಿಯಾಗಿಯೇ ಉಳಿದಿದ್ದಳು. ತಾಯಿ-ತಂದೆ ಸತ್ತ ನಂತರ ಅನಾಥೆಯಾದಳು ಕೂಡ. ಅವಳ ಅಪಾರವಾದ ದುಃಖ-ಸಂಕಟಗಳನ್ನು ಕಣ್ಣಿಂದ ಕಂಡು ಕಾಣುತಿದ್ದು ದೂರೀಕರಿಸಲು ಮುಂದಾಗಲಿಲ್ಲ ಮನಸ್ಸು. ಲೈನ್‌ಮನ್ ಮಿಥೆಲ್ ದಯಾರ್ದ್ರಹೃದಯದಿಂದ ಅವಳನ್ನು ಗೃಹಿಣಿಯಾಗಿ ಸ್ವೀಕರಿಸಿ ಮನೆ-ಮನಸ ಎರಡನ್ನೂ ತುಂಬಿಕೊಂಡ. ಅವಳು ಗೃಹಿಣಿಯಾದ ನಂತರ ಮೈ

ತುಂಬಿಕೊಂಡು ಆರೋಗ್ಯವಂತೆಯಾದುದು ರೋಮಹರ್ಷಕ. ಎಲ್ಲಾ ಗೃಹಿಣಿಯರಂತೆಯೇ ಸಂಸಾರದಲ್ಲಿ ಅಚ್ಚುಕಟ್ಟು ಪ್ರೀತಿ-ವಿಶ್ವಾಸಗಳ-ಸಾಧನೆಯಲ್ಲಿ ಸರ್ವಾಂಗ ಸುಂದರವಾಗಿ ನಡೆಸಿದಳು ಸಂಸಾರವನ್ನು. ಪ್ರೀತಿ ಹಾಲ್ಗಡಲಾಗಿ ಹರಿಯಿತು. ಇಬ್ಬರೂ ಆನಂದ ಸುಧೆಯಲ್ಲಿ ಮುಳುಗಿದರು. ಪಮಿಾಲಳನ್ನು ಮದುವೆಯಾಗಬೇಡ ಎಂದು ಉಪದೇಶ ಮಾಡಿದವರು ಮೂಗಿನ ಮೇಲೆ ಬೆರಳಿಟ್ಟರು. ಆಕೆ ಬಿಂಗ್ ಮಿಥೆಲ್‌ಗೆ ಜನ್ಮ ಕೊಟ್ಟಾಗ ತೊಂದರೆ ಪಡಲಿಲ್ಲ. ಪ್ರಾಣ ನೀಗಿದ್ದು ಅಪಘಾತದಿಂದ. ನಾಲ್ಕು ವರ್ಷದ ಬಿಂಗ್ ಮಿಥೆಲ್ ತಾಯಿಯ ದುರ್ಮರಣ ಅರಿತುಕೊಂಡಿದ್ದ. ಬಾಲಕನ ದುಃಖ-ಸಂಕಟ ನೋಡಿದ ನೆರೆ ಮನೆಯವರು ತಮ್ಮ ಮಕ್ಕಳೊಂದಿಗೆ ಆಡಿಕೊಂಡಿರಲು ಕರೆದು ಉಪಚರಿಸುವರು. ಆದರೂ ಬಿಂಗ್ ಮಿಥೆಲ್ ಒಮ್ಮೆ ಸಂತೋಷವಾಗಿದ್ದರೆ ಇನ್ನೊಮ್ಮೆ ದುಃಖಿ.

ಮಗನನ್ನು ಶಾಲೆಗೆ ಬಿಡುವಾಗ ಟೀಚರ್ ರೆಟಾನಾಳಿಗೆ 'ಮಗುವನ್ನು ನೋಯಿಸಬೇಡ. ತಬ್ಬಲಿ ಮಗು.' ಎಂದು ಆಗಾಗ ಹೇಳಿ ಬರುತಿದ್ದ ಮಿಥೆಲ್.

"Don't worry I will look after him very well" ಎಂದು ಭರವಸೆ ನೀಡಿ ಮಗುವನ್ನು ಮುದ್ದಿಸಿ ಒಳಗೆ ಕರೆದು ಕೊಳ್ಳುತಿದ್ದಳು ಅವಳು. ಅ ಭರವಸೆ ಮಿಥೆಲ್ ಹೃದಯದಲ್ಲಿ ಹೆಪ್ಪುಗಟ್ಟುತಿತ್ತು ಶೀತಗಾಲದ ಮಂಜಿನಂತೆ.

* * * *

ಟೀಚರ್ ರೆಟಾನಾ ಬಿಂಗ್ ಮಿಥೆಲ್-ನ ಗಲ್ಲ ಮುದ್ದಿಸಿ ಕೇಳಿದಳು,

"ನಾನು ನಿನ್ನ ಮನೆಗೆ ಬರಲೆ ?"

"ಬೇಡ.....ಬೇಡ." ತಲೆಯಾಡಿಸಿದ ಬಾಲಕ.

"ಏಕೆ ಮಗೂ ? ನಿನಗೆ ನನ್ನ ಕಂಡರೆ ಇಷ್ಟವಿಲ್ಲವೇ ?"

ಮಗುವಿನ ರುದ್ರ ಮೌನವೇ ಉತ್ತರವಾಯಿತು. ಬಾಗಿದ ತಲೆ ಯೆತ್ತಲಿಲ್ಲ.

ಅವಳು ತಲೆಯ ಮೇಲೆ ಕೈಯಿಟ್ಟು ಕೇಳಿದಳು "ಹೇಳು ಮಗೂ, ನಾನು ಬರಲೇ ?"

"..........."

ಬಿಂಗ್ ಮಿಥೆಲ್ ಎಲ್ಲಾ ಮಕ್ಕಳೊಡನೆ ಹೊರಟು ಬಿಟ್ಟ. ಹಿಂದಿನಿಂದ ಅವಳು ನೋಡಿಯೇ ನೋಡಿದಳು. ಆ ಶಾಲೆಯಿರುವುದು ಹಳ್ಳಿಯ ಹೊರ ವಲಯದಲ್ಲಿ. ಸ್ವಲ್ಪ ಎತ್ತರವಾದ ಪ್ರದೇಶ. ಅಂಕುಡೊಂಕಿನ ಹಾದಿ ಅಲ್ಲಿಯವರೆಗೂ ಹರಿಯುತ್ತದೆ. ಇತರ ಮಕ್ಕಳೊಡನೆ ದೂರದ ಹಾದಿಯಲ್ಲಿ ನಡೆದೇ ಮನೆಗೆ ಬರುತ್ತಾನೆ ಬಿಂಗ್ ಮಿಥೆಲ್. ಬೆಳಗಿನಿಂದ ಶಾಲೆಯಲ್ಲಿ ಮನೆಗೆ ಬಂದರೆ ಆದರದಿಂದ ಉಣಿಸಿಡುವವರಿಲ್ಲ. ಎಲ್ಲರ ಮನೆಯಲ್ಲೂ ಅಮ್ಮಾ ಇದ್ದಾಳೆ. ಮಕ್ಕಳು ಆನಂದದಿಂದ ಮನೆ ಸೇರಿ ಕೊಂಡು ತಿಂಡಿ ತಿನಿಸುಗಳನ್ನು ತಿನ್ನುತ್ತಾರೆ. ಅವನಿಗೂ ಯಾರಾದರೂ ಕೊಡುವುದುಂಟು. ಆದರೂ ಅದರ ರೀತಿಯೇ ಬೇರೆ. ಸ್ವಲ್ಪ ಹೊತ್ತು ತನ್ನ ಮನೆಯ ಮೆಟ್ಟಲಿನ ಮೇಲೆ ಕುಳಿತು ಮುಚ್ಚಿದ ಬಾಗಿಲಿಗೆ ಒರಗಿ ಕುಳಿತರೆ ಖಿನ್ನ ಮುಖದ ಭಾವನೆಗಳು ಒಡಲ ಸಂಕಟವನ್ನು ತೋರುತ್ತವೆ. ಅಷ್ಟರಲ್ಲೇ ಮಕ್ಕಳು ಆಟದ ಕೂಟಕ್ಕೆ ಎಳೆದೊಯ್ಯುತ್ತಾರೆ. ಅಳಿದ ತಾಯಿಯ ಸುತ್ತಮುತ್ತ ಸುಳಿಸುತ್ತುವ ಮನಸ್ಸು 'ಅಮ್ಮ' ಮಂತ್ರವನ್ನು ಹಾಡುತ್ತಲೇ ಇರುತ್ತದೆ. ಅಮ್ಮ-ಅಮ್ಮ-ಅಮ್ಮ.....ಒಡ ಹುಟ್ಟುಗಳಿಲ್ಲ. ಅಪ್ಪ ಹಿಂದಿರುಗುವುದು ಸಂಜೆ ಆರು ಗಂಟೆಯ ನಂತರ. ಮುಚ್ಚಿದ ಬಾಗಿಲು. ಖಾಲಿ ಮನೆ.....ಟೀಚರ್ ರೆಟಾನಾ "ನಾನು ನಿನ್ನ ಮನೆಗೆ ಬರಲೆ?" ಎಂದು ಕೇಳಿದಳಲ್ಲಾ, ಅದೇಕೆ ? ? ಅವಳಿಗೇನು ಕೆಲಸ ಇಲ್ಲಿ ? ? ಎಳೆಯ ಮನಸ್ಸು ಎಷ್ಟೋ ಬಾರಿ ಆ ಪ್ರಶ್ನೆಯನ್ನು ಮೆಲುಕು ಹಾಕುತ್ತದೆ ಮನದಲ್ಲಿ.

*    *    *    *

ಮನೆಯಿಂದ ರೈಲ್ವೆ ನಿಲ್ದಾಣ ಅಂತಹ ದೂರವೇನಿಲ್ಲ. ನಾನೇ ಏಕೆ ಹೋಗಬಾರದು ?

ಆ ಪ್ರಶ್ನೆ ಎದ್ದೊಡನೆಯೇ ಬಿಂಗ್ ಮಿಥೆಲ್ ಹೊರಟೇ ಬಿಟ್ಟ. ಪುಟ್ಟ ಹೆಜ್ಜೆಗಳನ್ನು ದಿಟ್ಟತನದಿಂದಲೇ ಇಟ್ಟು ನಡೆಯ ತೊಡಗಿದ. ಜೊತೆಗಾರರನ್ನು ಕರೆಯುವ ಯೋಚನೆಯೂ ಮೂಡಲಿಲ್ಲ. ಎಳೆಂಟು ಮನೆಗಳ ಸಣ್ಣ ವಲಯವನ್ನು ದಾಟಿದನಂತರ ನಿರ್ಜನ ಹಾದಿ. ನಿರ್ಜನ ತಾಣ.

ಹುಡುಗ ಅದಾವುದನ್ನು ಲೆಕ್ಕಿಸದೆ ನಡೆದೇ ಬಿಟ್ಟ. ಅಪ್ಪ ಕುಳಿತುಕೊಳ್ಳು ತಿದ್ದ ಪೈನ್ ಮರಗಳ ಬೃಹದ್ ನಿಕುಂಜದ ಅರಿವೂ ಅವನಿಗಿತ್ತು. ರೈಲು ಆಗಲೇ ಹೊರಟು ಹೋಗಿರುವುದರಿಂದ ಅಪ್ಪ ಇರುವುದು ಅಲ್ಲೇ. ಇನ್ನೊಂದು ರೈಲು ಆರು ಗಂಟೆಗೆ ಬರುತ್ತೆ. ಅನಂತರವೇ ಅಲ್ಲಿಂದ ಪ್ರೀತಿಯ ತಂದೆಯ ನಿರ್ಗಮನ. ಇನ್ನೂ ಒಂದುವರೆ ತಾಸು ಇರುವುದ ರಿಂದ ನಾನೊಂದಿಷ್ಟು ಪೈನ್ ಮರಗಳ ತಂಪಿನ ತಾವಿನಲ್ಲಿ ಅಡ್ಡಾಡಬಹುದು ಎಂಬ ಯೋಚನೆ ತಲೆಯಲ್ಲಿ. ಸ್ವಲ್ಪ ದೂರ ನಡೆದ ನಂತರ ಅಲ್ಲೇ ಸಮೀಪದಲ್ಲಿದ್ದ ತಾಯಿ ಪಮೀಲಳ ಸಮಾಧಿಯ ನೆನಪಾಗಿ ಅತ್ತ ನಡೆದ. ಸಮಾಧಿಯ ತಾಣದ ಸುತ್ತಮುತ್ತ ತಂತಿ ಬೇಲಿಯ ಶ್ರೀರಕ್ಷೆ. ಊರು ಚಿಕ್ಕ ದಾದುದರಿಂದ ಮಸಣವೂ ಚಿಕ್ಕದೆ. ಸುತ್ತಲೂ ಮುಳ್ಳು ಬೇಲಿಯಿದ್ದುದ ರಿಂದ ಪ್ರವೇಶ ಮುಂಬಾಗಿಲಿನ ಮೂಲಕ ಮಾತ್ರವೇ. ಬಾಲಕ ಬೇಲಿಯ ಬದಿಯಲ್ಲೇ ನಡೆದು ಮುಂಬಾಗಿಲಿನ ಮೂಲಕ ಪ್ರವೇಶಿಸಿದ. ಸಮಾಧಿಯ ತಲೆದೆಶೆಯಲ್ಲಿ ನೆಟ್ಟ ಸಿಲುಬೆಯಾಕಾರದ ಕಲ್ಲಿನಲ್ಲಿ "ಇಲ್ಲಿ ಪ್ರೀತಿಯ ಮಡದಿ ಪಮೀಲ ದೀರ್ಘ ಶಾಂತಿ ನಿದ್ರೆಯಲ್ಲಿದ್ದಾಳೆ. ದೇವರು ಶಾಂತಿ ರಕ್ಷೆ ನೀಡಲಿ ಲೈನ್‌ಮನ್ ಮಿಥೆಲ್ ಮತ್ತು ಬಿಂಗ್ ಮಿಥೆಲ್" ಎಂಬ ಬರವಣಿಗೆಯಿತ್ತು. ಸಮಾಧಿಯಂಗಣದ ತುಂಬ ಬೆಳೆದ ವರ್ಣವರ್ಣದ ವಾಸಂತೀ ಹೂಗಳ ಸೊಗಸನ್ನೂ ಕಣ್ತುಂಬ ನೋಡಿದ. ಕಣ್ಣುಗಳಲ್ಲಿ ಫಳಕ್ಕನೆ ನೀರಾಡಿತು. ಸಮಾಧಿಯ ಬದಿಯಲ್ಲಿ ಮಂಡಿಯೂರಿದ, ಪುಟ್ಟ ಬಾಲಕ. ತಂದೆಯೊಂದಿಗೆ ಹಿಂದೆ ಎರಡು ಬಾರಿ ಬಂದಿದ್ದು ಸಮಾಧಿಗೆ ಹೂವೇರಿಸಿದ್ದ. ಈ ಸಲಿ ಮಾತ್ರ ತಾನೊಬ್ಬನೇ. ತನುಮನಗಳಲ್ಲಿ ದುಃಖ-ಸಂಕಟಗಳ ಝರಿ ರೊಯ್ಯನೆ ಹರಿದಾಡಿತು. ಕಣ್ಣುಗಳಂಚಿನಲ್ಲಿ ತುಂಬಿದ್ದ ನೀರು ಕೆನ್ನೆಗಳ ಮೇಲೆ ಹನಿಹನಿಯಾಗಿ ಉದುರಿತು.

"ಅಮ್ಮಾ! ನನ್ನನ್ನು ಏಕೆ ಬಿಟ್ಟುಹೋದೆ ?" ಎಳೆದನಿ ಗದ್ಗದ ಕಂಠದಿಂದ ಮೊಳಗಿದ ಕ್ಷಣವೇ ದೂರದ ಬೆಟ್ಟ ಮರುದನಿ ಕೊಟ್ಟಿತ್ತು "ಅಮ್ಮಾ! ನನ್ನನ್ನು ಏಕೆ ಬಿಟ್ಟು ಹೋದೆ ?"

ಬಾಲಕ ಸಮಾಧಿಯ ಮೇಲೆ ಹಣೆಯಿಟ್ಟು ಬಿಕ್ಕಿ ಬಿಕ್ಕಿ ಅತ್ತ.

ಯಾರೋ ನಡೆದು ಬಂದ ಪಾದ ಸಪ್ಪಳ ಕೇಳಿಬಂತು. ತಟ್ಟನೆ ತಲೆಯೆತ್ತಿ ನೋಡಿದ ಬಿಂಗ್. ಪುಷ್ಪಗುಚ್ಛ ಹಿಡಿದುಕೊಂಡಿದ್ದ ಸ್ತ್ರೀಯೊಬ್ಬಳು ನಿಂತಿದ್ದಾಳೆ ಬಳಿಯಲ್ಲಿ.

"ಏನಪ್ಪಾ, ಮಗೂ? ಏಕೆ ಅಳುತಿದ್ದಿ ?" ಎಂದ ಬಳಿಕ ಅವನನ್ನು ಹಿಡಿದೆತ್ತಿ ತಲೆಯನ್ನು ನೇವರಿಸಿ ಕಂಬನಿಯನ್ನು ತೀಡಿ ಮುದ್ದುಗೈದ. ನುಡಿದಳು "ಇನ್ನು ಅಳುವುದರಿಂದ ಪ್ರಯೋಜನವಿಲ್ಲ. ಏಳು, ನಡೆ ಮನೆಗೆ ಬಿಟ್ಟು ಬರುವೆ."

ಹಣೆಗೆ ಹೂಮುತ್ತನಿಟ್ಟು ಕೈಚೀಲದಲ್ಲಿದ್ದ ಸೇಬಿನ ಹಣ್ಣೊಂದನ್ನು ಕೈಗಿಟ್ಟು ಸಮಾಧಾನಿಸಿದಳು. ನೋಡಿದರೆ ಅವಳು ತನ್ನ ತಾಯಿಯಂತೆಯೇ ಇದ್ದಾಳೆ. ಸ್ವಲ್ಪ ವಯಸ್ಸಾದುದರಿಂದ ತಾಯಿಯ ಅಕ್ಕನಿರಬಹುದೋ ಏನೋ ಎಂದುಕೊಂಡ ಮನದಲ್ಲಿ ಬಿಂಗ್ ಮೆಥೆಲ್.

ಅವಳು ಬಾಲಕನನ್ನು ಮಸಣದಿಂದ ದಾಟಿಸಿ ಕಾಲುಹಾದಿಯನ್ನು ಮುಟ್ಟಿದನಂತರ ನುಡಿದಳು "ಇದೇ ಹಾದಿ ರೈಲು ನಿಲ್ದಾಣಕ್ಕೆ. ಹೋಗು ಮಗೂ!" ಎಂದಳು, ಕೆನ್ನೆಯನ್ನು ಮುದ್ದುಗೈದು.

ಬಿಂಗ್ ಮಿಥೆಲ್ ನಾಲ್ಕು ಹೆಜ್ಜೆ ಮುಂದಿಟ್ಟ ಹಿಂದುರುಗಿ ನೋಡಿದರೆ ಆಕೆಯಿರಲಿಲ್ಲ.

* * * *

ಸೀದಾ ರೈಲು ನಿಲ್ದಾಣದ ಹಾದಿ ಹಿಡಿದ. ಅಲ್ಲಿಂದ ಮುಂದೆ ಹತ್ತು ಮಾರು ಅಷ್ಟೆ. ಸ್ವಲ್ಪ ಹೊತ್ತಿನಲ್ಲೇ ಸಾಗಿತು ಹಾದಿ. ರೈಲು ಹೊರಟು ಹೋಗಿತ್ತು. ನಿರ್ಜನ-ನೀರವಗಳಿಂದ ಬಿಕೋ ಎನ್ನುತ್ತದೆ ನಿಲ್ದಾಣ. ಕೆಲವೇ ಕ್ಷಣಗಳಲ್ಲಿ ಉದ್ದಗಲಕ್ಕೂ ಅಳೆಯಿತು ಕಣ್ಣನೋಟ. ಇನ್ನು ಅಪ್ಪ ಪೈನ್ ಮರಗಳ ತೋಪಿನಲ್ಲಿರುತ್ತಾನೆ ಎಂಬುದು ಖಚಿತ. ಬಿಂಗ್ ಮಿಥೆಲ್ ಅತ್ತಲೇ ನಡೆದ. ತಲೆಯಲ್ಲಿ ಅಳಿದ ತಾಯಿಯ ಮತ್ತು ಮಸಣದಲ್ಲಿ ಸಿಕ್ಕಿದ ಅಜ್ಜಿಯ ವಿಷಯ ತುಂಬಿ ಹೋಗಿತ್ತು. ಆ ಹಾದಿ ಕೆಲವೇ ನಿಮಿಷಗಳಲ್ಲಿ ಕಳೆದುದೂ ತಿಳಿಯಲಿಲ್ಲ. ದೂರದಿಂದಲೇ ಅಪ್ಪ ಬಂಡೆಯ ಮೇಲೆ ಕುಳಿತಿದ್ದು ಕಂಡಿತು. ಅರೆ! ಜೊತೆಯಲ್ಲಿ ಕುಳಿತವರು ಯಾರು? ಇತ್ತ ಕಾಣಿಸುತಿದ್ದುದು ಹಿಂಭಾಗವಾದ್ದರಿಂದ ತಿಳಿಯುವಂತಿರ

ಲಿಲ್ಲ. ಹುಡುಗ ಸನಿಹಕ್ಕೆ ಹೋಗಿ ನೋಡುತ್ತಾನೆ! ಟೀಚರ್ ರೆಟಾನಾ! ಇಬ್ಬರೂ ಮೈಗೆ ಮೈ ಹಚ್ಚಿ ತಬ್ಬಿ ಕುಳಿತಿದ್ದಾರೆ! ಮುಖ ಒಂದನ್ನೊಂದು ಮುದ್ದಿಡುತ್ತಿವೆ! ಒಂದೆರಡು ಗಳಿಗೆ ಸ್ತಬ್ಧಗತಿಯಲ್ಲಿ ನಿಂತು ನೋಡಿ ಕಳಕಳಿಯಿಂದ "ಡ್ಯಾಡ್!" ಎಂದ ಬಿಂಗ್ ಮಿಥೆಲ್. ಅವರವರ ಆನಂದ ಸಾಮ್ರಾಜ್ಯದಲ್ಲಿ ಸಂಪೂರ್ಣ ಮುಳುಗಿಹೋಗಿದ್ದ ಅವರ ಕಿವಿಗೆ ಎಳೆದನಿ ಬೀಳಬೇಕೆ? ನಗೆಮಾತುಗಳ ಲಗ್ಗೆ ನಡೆದೇ ಇತ್ತು.

"ಡ್ಯಾಡ್!.........ಡ್ಯಾಡ್!"

ಈ ಸಲಿ ಇಬ್ಬರೂ ತಿರುಗಿ ನೋಡಿದರು! ಬಿಂಗ್ ಮಿಥೆಲ್ ಬಿರುಗಣ್ಣನೋಟದಿಂದ ನೋಡುತ್ತಲೇ ಇದ್ದಾನೆ!

"ಕಮ್ ಮೈ ಡಿಯರ್ ಚೈಲ್ಡ್! ಎನ್ನುತ್ತ ಎದ್ದು ನಿಂತ ಲೈನ್ ಮನ್ ಮಿಥೆಲ್ ಎರಡು ಹೆಜ್ಜೆ ಮುಂದುವರಿದು ಮಗನನ್ನು ಆಲಂಗಿಸಿ ಕೊಂಡ.

"ಇದೇಕೆ ಬಿಂಗ್ ಇಲ್ಲಿಯತನಕ ಬಂದು ಬಿಟ್ಟೆ? ಇನ್ನು ಹತ್ತು ನಿಮಿಷಗಳಲ್ಲಿ ರೈಲು ಬರುತ್ತೆ. ಅನಂತರ ನಾನೆ ಬರುತ್ತಿದ್ದೆ. ಇಷ್ಟು ದೂರ ಒಬ್ಬನೇ ಬಂದೆಯಲ್ಲಾ?"

"ಮನೆಯಲ್ಲಿ ಬೇಸರ."

ಟೀಚರ್ ರೆಟಾನಾ ಬಳಿಗೆ ಬಂದು ತಲೆಯಮೇಲೆ ಕೈಯಿಟ್ಟು ನಿನಗೆ ಅಷ್ಟೊಂದು ಬೇಸರವೇ?" ಎಂದಳು.

"ಹೌದು........." ತಲೆಯಾಡಿಸಿದ ಬಾಲಕ.

"ಇನ್ನು ಮುಂದೆ ನಾನು ನಿನ್ನ ಮನೆಗೆ ಬರುವೆ. ಅನಂತರ ಬೇಸರ ಗೀಸರ ಏನೂ ಇರುವುದಿಲ್ಲ."

ಅವಳ ಮಾತಿನ ಅಂತರಾಳ ಏನೇನೂ ಅರ್ಥವಾಗಲಿಲ್ಲ, ಮಿಕಿ, ಮಿಕಿ, ನೋಡಿದ ಬಾಲಕ ಬಿಂಗ್ ಮಿಥೆಲ್, ಕಣ್ಣುಗಳಲ್ಲಿ ಆಶ್ಚರ್ಯದ ಛಾಯೆ ಇಣಿಕಿತು.

* * * *

ಟೀಚರ್ ರೆಟಾನಾ ಕೆಲವೇ ದಿನಗಳಲ್ಲಿ ವಿನೂತನ ಗೃಹಿಣಿಯಾಗಿ ಮನೆಗೆ ಬಂದಳು. ಅವಳು ಬಂದ ದಿನವೇ ಬಾಲಕನ ಸೆಜ್ಜೆ ವರಾಂಡಕ್ಕೆ

ಬದಲಾವಣೆ ಹೊಂದಿತು. ತಂದೆ ಹೇಳುತ್ತಿದ್ದ ಕಥೆಗಳು, ರಮಿಸುತ್ತಿದ್ದ ಮುದ್ದು ಮಾತಿನ ಮುತ್ತುಗಳು ಅಂದಿಗೇ ಕೊನೆಯಾದುವು. ಚಿಕ್ಕಮ್ಮ ಊಟತಿಂಡಿಗಳನ್ನೇನೋ ಕೊಡುತಿದ್ದಳು. ಶಾಲೆಗೂ ತನ್ನೊಂದಿಗೇ ಕರೆದೊಯ್ಯುತಿದ್ದಳು. ಆದರೂ, ಅವಳಲ್ಲಿ ಆತ್ಮೀಯತೆ ಅಷ್ಟಕ್ಕಷ್ಟೆ. ಸ್ವಲ್ಪ ಕಾಲದನಂತರ ಅವನಿಗೊಬ್ಬ ತಮ್ಮ ಬಂದ. ಬಿಂಗ್ ಮಿಥೆಲ್ ಮಗುವಿನ ಕಾವಲಿಗಾಗಿ ಮನೆಯಲ್ಲಿ ತಳ್ಳಲ್ಪಟ್ಟ. ವಿದ್ಯೆಬುದ್ಧಿಗೆ ಕಲ್ಲು ಬಿತ್ತು. ಅಳುವ ಮಗುವನ್ನು ಬೀದಿಯಲ್ಲಿ ಹೊತ್ತು ತಿರುಗಿ ಸುಧಾರಿಸುವ ರಣಗೋಳು. ಜೊತೆಗೆ ಸರಿಯಾಗಿ ನೋಡಿಕೊಳ್ಳಲಿಲ್ಲವೆಂಬ ಸಿಟ್ಟಿನ ಹೊಡೆತ-ಬಡಿತಗಳ ಉಂಬಳಿ. ಊಟ-ತಿಂಡಿಗಳಲ್ಲೂ ಏರು ಪೇರು. ಅಪ್ಪ ಕಣ್ಣಿದ್ದೂ ಕುರುಡು. ಬಿಂಗ್ ಮಿಥೆಲ್ ಹಣ್ಣುಗಾಯಿ ನೀರುಗಾಯಿ ಆದ.

ರೆಟಾನಾ ಎದುರಿಗಿಲ್ಲದಾಗ ತಂದೆಯನ್ನು ಕೇಳಿದ "ನಾನು ಶಾಲೆಗೆ ಹೋಗಬೇಕು."

"ನಿನಗೆ ತಮ್ಮ ಎಂದರೆ ಪ್ರೀತಿಯಿಲ್ಲವೇ? ವಿದ್ಯೆ ಎಂದಾದರೂ ಕಲಿಯಬಹುದು. ತಮ್ಮನನ್ನು ಬಿಡುವುದುಂಟೇ ಹೇಳು."

"..............."

ಲೈನ್‌ಮನ್ ಮಿಥೆಲ್ ಮನೆಯಲ್ಲಿದ್ದಾಗ ಏನೋ ಒಂದು ರೀತಿ ಇರುತಿದ್ದ ಅವಳು ಮುಲತಾಯಿ ಘೋರಣೆ ತೋರುತಿದ್ದುದು ಅನಂತರವೇ. ಬಾಲಕ ಬಿಂಗ್ ಮಿಥೆಲ್ ದಿನೇ ದಿನೇ ಬತ್ತಿ ಬಾಡಿ ಬಿದಿರಿನ ದೆಬ್ಬೆಯಂತಾದನ್ನು ನೋಡಿಯೂ ಸುಮ್ಮನಿದ್ದ, ಮಿಥೆಲ್. ಬಾಲಕ ಎಷ್ಟೋ ಬಾರಿ ಜೀವ ಸಂಕಟವನ್ನು ತಾಳಲಾರದೆ ಎಲ್ಲಾದರೂ ಓಡಿಹೋಗೋಣವೇ ಎಂದು ಯೋಚಿಸುತ್ತಿದ್ದ. ಆ ಸಣ್ಣ ಊರಿನಲ್ಲಿ ಓಡಿಹೋಗುವುದಾದರೂ ಎಲ್ಲಿಗೆ? ಬೇರೆ ಊರು ಎಲ್ಲಿ-ಯಾವಕಡೆ ಇದೆಯೋ ದೇವರಿಗೆ ಗೊತ್ತು. ರೈಲು ಹತ್ತಿ ಹೋಗಣವೆಂದರೆ ಅಪ್ಪ ಇರುವುದು ಅಲ್ಲೇ. ಸಂಕಟದ ಗೋಳನ್ನು ತಪ್ಪಿಸಿಕೊಳ್ಳುವ ದಾರಿಯೇ ತೋರುತ್ತಿಲ್ಲ. ಬಾಲಕ ಕಂಗಾಲಾದ. ಮನೆಮನೆಯ ಮಕ್ಕಳೂ ಶಾಲೆಗೆ ಹೋಗುತ್ತಾರೆ. ರೆಟಾನಾ ಸಹ ಹೆಮ್ಮೆಯಿಂದ ಹೊರಡುತ್ತಾಳೆ. ಬಾಲಕ ಬಿಂಗ್ ಮಿಥೆಲ್ ಕಿಟಕಿ

ಯಲ್ಲಿ ಮೊಗವಿಟ್ಟು ಎಲ್ಲರ ಕಡೆಯೂ ಪಿಳಿಪಿಳಿ ನೋಡುತ್ತಾನೆ. ಕಣ್ಣುಗಳು ತಟಪಟನೆ ಹನಿಯುತ್ತವೆ.

*    *    *    *

ಲೈನ್‌ಮನ್ ಮಿಥೆಲ್ ರೈಲು ನಿಲ್ದಾಣಕ್ಕೆ ಹೊರಡುವುದು ಬೆಳಿಗ್ಗೆ ಎಂಟುಗಂಟೆಗೆ. ರೆಟಾನ ಹತ್ತು ಗಂಟೆಗೆ ಶಾಲೆಯಲ್ಲಿರಬೇಕು. ಅವಳು ಹಿಂದಿರುಗುವುದು ಮಧ್ಯಾಹ್ನ ನಾಲ್ಕು ಗಂಟೆಗೆ. ಅಲ್ಲಿಯ ತನಕ ಮಗುವಿನ ಕಾವಲು. ತುಂಬಾ ತೂಕವಾಗಿದ್ದ ಮಗುವಿನ ಆರೈಕೆ ಕಷ್ಟವೇ. ಮುಸ್ಸಂಜೆಯಲ್ಲಿ ತಂದೆ ಮನೆಗೆ ಮರಳಿದ ನಂತರ ಮಗುವಿನ ಹೊಣೆಯನ್ನು ತಾನು ಹೊರತ್ತಿದ್ದ. ಆನಂತರವೇ ಬಿಂಗ್ ಮಿಥೆಲ್ ನೆರೆಮನೆ ಮಕ್ಕಳೊಂದಿಗೆ ಸೇರಬೇಕಾದರೆ. ಅವನ ಸಂಕಷ್ಟ ಈಗೀಗ ಎಲ್ಲರ ಗಮನಕ್ಕೂ ಬಂದಿತು. ಅವರೆಲ್ಲರ ಅಕ್ಕರೆ-ಪ್ರೀತಿ-ಸ್ನೇಹಗಳ ಮಳೆ ತುಂಬಿ ಹರಿಯುವ ಮುನ್ನವೇ ರೆಟಾನಾಳಿಂದ ಕರೆ ಕೇಳಿ ಬರುತ್ತದೆ, “ಬಿಂಗ್........ಬಿಂಗ್! ಎಲ್ಲಿದ್ದಿ ? ಬೇಗ ಬಂದು ಬಿಡು!” ರೆಟಾನಾ ಅಲ್ಲಿಗೆ ಸುಮ್ಮನಾಗದೆ ಒಳಗಣ ಕೆಲಸವನ್ನು ಹೇರುತ್ತಾಳೆ. ಜೊತೆಗೆ ಬೈಗುಳ ಹೊಡೆತಗಳೂ ಇರುತ್ತವೆ. ಅದನ್ನು ಕಂಡೂ ಕಾಣದಂತಿರುತ್ತಾನೆ, ಅಪ್ಪ.

ಒಮ್ಮೆ ಬಿಂಗ್ ಮಿಥೆಲ್ ಮುಸ್ಸಂಜೆಯಲ್ಲಿ ಹೊರಬಂದಾಗ ದೂರದಲ್ಲಿ ತಂದೆ ಬರುತಿದ್ದುದನ್ನು ಕಂಡ. ತನುಮನಗಳಲ್ಲಿ ಸುಖದುಃಖಗಳು ಹರಿದಾಡಿದುವು. ಅಲ್ಲಿಗೆ ಚುರುಕಿನಿಂದ ಹೆಜ್ಜೆ ಹಾಕಿದ.

“ಏನಪ್ಪ, ಬಿಂಗ್ ?”

“ನಿನ್ನೊಡನೆ ಮಾತಾಡುವುದಿತ್ತು ಅದಕ್ಕೆ..........”

“ಏನು ಸಮಾಚಾರ.........?”

“ನೀನು ಮನೆಯ ವಿದ್ಯಮಾನವನ್ನು ನೋಡಿಕೊಂಡು ಸುಮ್ಮನೇ ಇದ್ದಿ..........”

“ಏನು ಮಡಲಿ ಹೇಳು. ಅವಳ ಸ್ವಭಾವವೇ ಹಾಗೆ.”

“ನಾನು ಶಾಲೆಗೆ ಹೊಗಬೇಕು..........”

“ತಮ್ಮ ಸ್ವಲ್ಪ ದೊಡ್ಡವನಾಗಲಿ. ಇಬ್ಬರೂ ಒಟ್ಟಿಗೆ ಹೋದರಾಯಿತು.”

"ಅಲ್ಲಿಯತನಕ ಮನೆಯಲ್ಲಿ ಕೂಡಲಾರೆ."

"ಸ್ವಲ್ಪ ಸುಧಾರಿಸಿಕೊ........"

ಆ ವೇಳೆಗೆ ಅವರಿಬ್ಬರೂ ಮನೆಯ ಬಾಗಿಲಿಗೆ ಬಂದಿದ್ದರು. ರೆಟಾನಾ ಒಳಗಿನಿಂದಲೇ ಕೂಗಿದಳು "ಎಲ್ಲಿ ಹೋಗಿದ್ದಿ.......? ಟೇಬಲ್-ಗೆ ತಟ್ಟೆ ಲೋಟೆ ಇಡಲಿಲ್ಲ?"

"ಬಂದೆ.........ಆಶ್ಯಂಟೇ"

ಅವನು ಖಿನ್ನ ಮುಖದಿಂದ ಒಳಹೋದ.

* * * *

ಲೈನ್‌ಮನ್ ಮಿಥೆಲ್ ರೈಲು ನಿಲ್ದಾಣಕ್ಕೆ ಹೋದನಂತರ ಆಕಾಶದ ಕಡೆ ತಲೆಯೆತ್ತಿ ನೋಡಿದ. ಕಾರ್ಮೋಡಗಳು ದಟ್ಟವಾಗಿ ಕವಿದಿದ್ದುವು. ಮಳೆ ಬರುವುದು ಖಚಿತ ಎನಿಸಿತು. ರೈನ್ ಕೋಟು ತಂದಿಲ್ಲವೆಂಬುದನ್ನು ನೆನಪಿಸಿಕೊಂಡ. ಮೊದಲ ರೈಲು ಹಾದು ಹೋಗುವವರೆಗೂ ನಿಲ್ದಾಣವನ್ನು ಬಿಡುವಂತಿಲ್ಲ. ಸ್ವಲ್ಪಹೊತ್ತು ಕಾದಿದ್ದು ರೈಲು ಹೊರಟು ಹೋದನಂತರ ಮನೆಯಕಡೆ ದಪದಪ ಹೆಜ್ಜೆ ಹಾಕಿದ. ಮನೆ ಸಮೀಪಿಸುತ್ತಿದ್ದಂತೆ ಮಡದಿಯ ಕೂಗಾಟ ಕಿವಿಗಳನ್ನು ಗಡಚಿಕ್ಕಿತು. ಅವನು ಒಳ ಹೆಜ್ಜೆಯಿಡುತ್ತಲೂ ಅವಳ ಬಾಯಿಗೆ ಬೀಗ ಬಿದ್ದರೂ ಪರಿಸ್ಥಿತಿಯ ಅರಿವಾಯಿತು. ಪುಟ್ಟ ಬಿಂಗ್ ಮಿಥೆಲ್-ನನ್ನು ಚೆನ್ನಾಗಿ ಬಡಿದಿದ್ದಾಳೆ. ಕೆನ್ನೆಯಮೇಲೆ ಹೊಡೆತದ ಬಾಸುಂಡೆ ಕೆಂಪಗೆ ಬೆರಳು ಬೆರಳಾಗಿ ಕಾಣಿಸುತ್ತಿದೆ. ಎರಡು ಕಣ್ಣುಗಳಲ್ಲಿ ನೀರು ಸುರಿದು ಹೋಗಿತ್ತು. ಹೆದರಿದ ಹುಲ್ಲೆಮರಿಯಾಗಿದ್ದಾನೆ ಪುಟ್ಟ ಬಾಲಕ. ಅವನ ಸ್ಥಿತಿಗತಿ ಕರುಣಾಜನಕವಾಗಿದ್ದರೂ ಲೈನ್‌ಮನ್ ಮಿಥೆಲ್ ಮೌನಗತಿಯಲ್ಲಿ ಮಡದಿಯ ಕಡೆ ನೋಡಿದ. ಆ ಮಾಂಸಲ ಶರೀರ ಮಾತ್ರ ಅವನ ಕಣ್ಣಿಗೆ ಅಪ್ಯಾಯಮಾನವಾಗಿ ಕಂಡದ್ದು ನಿಜ....ಏನೂ ಹೇಳಲಾರದೆ ಮೂಕಮೌನ ತಾಳಿದ. ಒಂದೆರಡುಗಳಿಗೆ ಯಾರೂ ಮತಾಡದೆ ಉರುಳಿದುವೇನೋ ಅನಂತರ ಅವನೇ ಮೌನ ಮುರಿದ,

"ನಾನು ರೈನ್ ಕೋಟು ಬಿಟ್ಟು ಹೋಗಿದ್ದೆ........."

ರೆಟಾನಾ ಅವನನ್ನು ನೋಡಿದ ಕ್ಷಣವೇ ಇವನು ಹಿಂದಿರುಗಿ ಬಂದದ್ದಾದರೂ ಏಕೆ? ಪರೀಕ್ಷಾರ್ಥವಾಗಿಯೋ ಬಂದಿದ್ದಾನೋ ಎಂದು ಸಂಶಯಿಸಿದ್ದಳು ಕೂಡ. ಅವನು ರೈನ್ ಕೋಟ್ ಎಳೆದುಕೊಂಡು ಹೊರಟನಂತರ ಸಂಶಯಭೂತ ಹಿಂದೆ ಸರಿಯಿತು. ಚಿಕ್ಕಮ್ಮನ ಗಮನ ಒಂದೆರಡುಗಳಿಗೆ ಬೇರೆ ಕಡೆ ಹೊರಳಿದ ಕ್ಷಣ ಬಾಲಕ ಹೊರಬಿದ್ದು ಓಡತೊಡಗಿದ. ದೆಬ್ಬೆಯಂತಹ ಕೈಕಾಲುಗಳಿಗೆ ಎಲ್ಲಿಂದ ಭೀಮಶಕ್ತಿ ಒದಗಿ ಬಂತೋ. ಊರ ವಲಯವನ್ನು ದಾಟಿ ಆ ಮಸಣದ ಹತ್ತಿರಹತ್ತಿರ ಓಡುತಿದ್ದಾಗಲೇ ಅಂದು ಎದುರಾಗಿದ್ದ ಅದೇ ಪ್ರೌಢಸ್ತ್ರೀ ಎದುರಾದಳು.

ಬಾಲಕ ಅಚ್ಚರಿಯ ನೋಟದಿಂದ ನೋಡುತ್ತ ಗಕ್ಕನೆ ನಿಂತುಬಿಟ್ಟ.

ಗಿಡ ಮರಗಳಲ್ಲಿ ಹಕ್ಕಿಪಕ್ಕಿಗಳು ಚಿಲಿಪಿಲಿರಾಗವನ್ನು ಕೊರಳೆತ್ತಿ ಹಾಡಿದುವು. ಸುಯ್ಯಾಳಿ ಸುಯ್ ಸುಯ್ಯನೆ ಸುಯ್ದು ತನಿಸವಿಯನ್ನು ಎಲ್ಲೆಡೆ ಹಂಚಿತು. ಪ್ರಾತಃಸಮಯದ ಸೌಂದರ್ಯಧಾರೆ ಭೂಮಿಯ ಮೇಲೆ ಹರಿಯುತ್ತಲೇ ಇದೆ ಎಂದಿಗಿಂತಲೂ ಮಿಗಿಲಾಗಿ.



# ಮಲ್ಲಿಕಾ ಕೃತಿಗಳು

(ಕಾದಂಬರಿಗಳು)

೧) ಜೀವನಗಂಗಾ

೨) ಡಾ|| ಅಘೋರ

೩) ಡಾ|| ಕಮಲೇಶ್

೪) ವಂದೇ ಮಾತರಂ

೫) ಅನಂತಾನಂತದೆಡೆಗೆ

(ಕಥಾ ಸಂಕಲನ)

೬) ಶ್ರೀಮುಖಿ

೭) ಬಹುರತ್ನಾವಸುಂಧರಾ

೮) ರತ್ನಗರ್ಭಾವಸುಂಧರಾ

೯) ವೈಶಾಖೀ ಪರ್ವ (ಅಚ್ಚಿನಲ್ಲಿ)

೧೦) ಫಾಲ್ಗುಣೀ ಪರ್ವ

(ಕವಿತಾ ಸಂಕಲನ)

೧೧) ಪೂಜಾವಸಾನ ಸಮಯೋ....!

೧೨) ಧ್ಯಾನಾವಸಾನ ಸಮಯೋ....!

(ಪೌರಾಣಿಕ ನಾಟಕ)

೧೩) ಪುಣ್ಯಪಯೋನಿಧಿ

೧೪) ಪುಣ್ಯಾಭಿಸಾರ

(ಸಾನೆಟ್ಟುಗಳು)

೧೫) ತರಂಗಿಣಿ

(ಇವುಗಳ ಪ್ರತಿಗಳು ಮುಗಿದಿವೆ)

(ಕಥಾ ಸಂಕಲನ)

೧೬) ಸುಧಾಮಣಿ

ಎರಡನೆಯ ಮುದ್ರಣಗಳು

೧೭) ರಮಣೀಮಣಿ

೧೮) ಲಿಯೋನಾ

೧೯) ಶ್ರೀಹರ್ಷಲಾ

# ಮಲ್ಲಿಕಾ ಕೃತಿಗಳು

(ಕಾದಂಬರಿಗಳು)

೨೦) ಮನೋನ್ಮಣಿ
೨೧) ಸಂತ್ರಾಸಿನಿ
೨೨) ಆಸೆಯ ಸುಳಿಯಲ್ಲಿ

(ಕವಿತಾ ಸಂಕಲನ)

೨೩) ಗಗನ ಕುಸುಮ
೨೪) ಜೀವನ ಕುಸುಮ
೨೫) ಕಸ್ತೂರಿ ಮಾಲಿಕಾ
೨೬) ಮಂದಾರ ಮಾಲಿಕಾ
೨೭) ಚಂಪಕ ರಾಜಿ
೨೮) ನಾದ ಬಿಂದು
೨೯) ವಿಜಯ ಗಾಥಾ
೩೦) ಗಾನತೀರ್ಥ
೩೧) ಬಕುಳ ರಾಜಿ (ಅಚ್ಚಿನಲ್ಲಿ)
೩೨) ಕಲ್ಯಾಣ ಭಾರತಿ (ಅಚ್ಚಿನಲ್ಲಿ)

(ಸಂಜೀವನ ಕಾವ್ಯ)

೩೩) ರಾಗಾನುರಾಗಿಣಿ
೩೪) ಉತ್ತರೋತ್ತರಣಿ
೩೫) ಮಂಗಳ ಭಾರತಿ

(ಗದ್ಯ ಕಾವ್ಯ)

೩೬) ಐಂದ್ರ ಕೀರ್ತಿ ಕೇತನಂ

(ಉಪನಿಷತ್ಕಥಾ)

೩೭) ಕೃತಂ ಸ್ಮರ ಕ್ರತುಂ ಸ್ಮರ

(ಶಿಶು ಸಾಹಿತ್ಯ)

೩೮) ದೂರ ದೇಶದಲ್ಲಿ
೩೯) ಬೆಳದಿಂಗಳ ರಾತ್ರಿ
೪೦) ವಿಶೇಷ ಸುದ್ದಿ
೪೧) ರಂಗನ ಸಾಹಸ
೪೨) ಓಹಿಯೋಜ ಸರೋವರ
೪೩) ಕೌಶಿಕನ ಗೊಂಬೆ

---

ಲಕ್ಷ್ಮೀ ಪ್ರಕಾಶನ
7, ಲ್ಯಾಂಗ್ ಫೋರ್ಡ್ ರೋಡ್, ಬೆಂಗಳೂರು-560 025